# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.

3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐದಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.

4. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ವೆಂಕಟೇಶ ದಯಮಾಡೊ ವೇದವೇದ್ಯನೆ || ಪ ||

ಪಂಕಜಾಕ್ಷ ಅಭಯವಿತ್ತು ಬೇಗೆನ್ನ ರಕ್ಷಿಸಯ್ಯ || ಅ.ಪ ||

ಚಿತ್ತ ಚಂಚಲವ ಬಿಡಿಸೊ ಮತ್ತೆ ಕ್ರೋಧವ ಓಡಿಸೋ |
ಭ್ರಾಂತಿ ವಿಷಯಂಗಳು ಬೇಡ ಕಂತುಪಿತ ನಾರಾಯಣ

ಸೃಷ್ಟಿ ಮೂರರೊಳಗೆ ನೀನೆ ಕಷ್ಟ ಒಡಿಸುವರೇನೋ |
ನಷ್ಟ ತನ್ನ ನೋಡಬೇಡೋ ದೃಷ್ಟಿಸಿ ನೋಡೊ ದಯಾಳೊ

ಬಾಳ ಅಪರಾಧಿ ನಾನು ನಿನ್ನ ಬಳಿಗೆ ಬಂದೆ ನಾನು |
ಒಲಿದು ಎನ್ನ ರಕ್ಷಿಸಯ್ಯ ಮೇಲುಗಿರಿ ಪುರಂದರ ವಿಠಲ

—ಶ್ರೀ ಪುರಂದರದಾಸರು

## ಸಪ್ತಗಿರಿ

## ಮುಂದಿನ ಸಂಚಿಕೆಯಲ್ಲಿ

## ಆಗಸ್ಟ್ 1981

ನಿಂದಾಸ್ತುತಿ
—ಕೆ. ಎಂ. ಅಚ್ಯುತಕುಮಾರ್

ಸೀತೆ
—ಎ. ಪಂಕಜ

ಯೋಗ ಎಂದರೇನು
—ಟಿ. ಎಸ್. ಮಹಾಲಕ್ಷ್ಮಿ

ವೇದಾಂತ ದೇಶಿಕರ ವ್ಯಾಖ್ಯಾನ ಕೃತಿಗಳು
—ಡಾ॥ ಅನಂತರಂಗಾಚಾರ್ಯ

ಜೊತೆಗೆ ಗೃಹಲಕ್ಷ್ಮಿ, ಕಿಶೋರಜಗತ್, ಯುವವಾಣಿ ಮೊದಲಾದ ಸ್ಥಿರ ಶೀರ್ಷಿಕೆಗಳೊಡನೆ ಆಗಸ್ಟ್ ಮೂರನೆವಾರದಲ್ಲಿ ಬಿಡುಗಡೆಯಾಗಲಿದೆ.

ವಿಶೇಷ :

ಕರ್ನಾಟಕ ಹರಿದಾಸ ಆರಾಧನೆ
ಶ್ರೀಪಾದರಾಯರ ಆರಾಧನೋತ್ಸವ
ವಿವರಗಳು ಈ ಸಂಚಿಕೆಯಲ್ಲಿ
ಪ್ರಕಟವಾಗಲಿವೆ.

**ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿ.**






# ಸಪ್ತಗಿರಿ

ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಸಂಪುಟ 12]    ಜುಲೈ 1981    [ಸಂಚಿಕೆ 2

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

---



## ವಿಷಯಸೂಚಿ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾ ಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ರಾಮಾಯಣದ ಮಹೋನ್ನತಿ

"ಕೂಜನ್ತಂ ರಾಮ-ರಾಮೇತಿ
ಮಧುರಂ ಮಧುರಾಕ್ಷರಮ್ ।
ಆರುಹ್ಯ ಕವಿತಾಶಾಖಾಂ
ವಂದೇ ವಾಲ್ಮೀಕಿಕೋಕಿಲಮ್ ॥"

ಕವಿತೆಯೆಂಬ ಕೊಂಬೆಯ ಮೇಲೇರಿ ಕುಳಿತು 'ರಾಮ' 'ರಾಮ', ಎಂದು ಮಧುರವಾಗಿ ಹಾಡುತ್ತಿರುವ ಕೋಗಿಲೆಯೇ ವಾಲ್ಮೀಕಿ. ನಮಗೆ ಅವನು ವಂದ್ಯ! ಹೀಗೆ ನಮಸ್ಕಾರ ಮಾಡಿದವರು ನಮ್ಮ ದೇಶದ ಹಿಂದಿನ ಮಹಾಕವಿಗಳು; ದೊಡ್ಡ ನಾಟಕಕಾರರು ಮತ್ತು ಉದ್ದಾಮ ಆಚಾರ್ಯ ಪುರುಷರು. ಭಾರತದ ಕವಿಗಳ ಗಣದಲ್ಲಿ ಎಲ್ಲ ಶತಮಾನಗಳಲ್ಲೂ ವಾಲ್ಮೀಕಿಗೇ ಆದ್ಯತೆ; ಆದಿಕವಿ ಆತನೊಬ್ಬನೇ. ಸಂಸ್ಕೃತದಲ್ಲಿ, ಕನ್ನಡದಲ್ಲಿ, ಮಿಕ್ಕೆಲ್ಲ ಭಾರತೀಯ ಭಾಷೆಗಳಲ್ಲಿ ಇಪ್ಪತ್ತು ಶತಮಾನಗಳಷ್ಟು ದೀರ್ಘಾವಧಿಯಲ್ಲಿ ರಾಮಾಯಣಸಾಹಿತ್ಯ ಅನಂತಮುಖವಾಗಿ ಬೆಳೆದಿದೆ; ಇಂದಿಗೂ ಬೆಳೆಯುತ್ತಲೇ ಇದೆ. ಇದರ ರಹಸ್ಯವೇನು?

ವಾಲ್ಮೀಕಿಗಳು ಬರಿಯ ಕವಿಗಳಷ್ಟೇ ಅಲ್ಲ, ಮಹರ್ಷಿಗಳೂ ಅಹುದು, ರಾಮಾಯಣಕಥೆಯಲ್ಲಿ ಪಾತ್ರಧಾರಿಗಳೂ ಅಹುದು. ಅವರ ಕೃತಿ ಒಂದೇ- ರಾಮಾಯಣ. ಅದರ ಅರ್ಥಜ್ಞಾನ ಹೋಗಲಿ, ಬರಿಯ ಪಾರಾಯಣವೂ ಪುಣ್ಯಪ್ರದವೆಂಬ ಪೂಜ್ಯ ಭಾವನೆ ನಮ್ಮ ಜನರದು. ಇನ್ನು ಕಥಾಶ್ರವಣದಿಂದ ಸದ್ಯಃಫಲವಾದ ಕರ್ಣಾನಂದ; ಜೀವನಾದರ್ಶಗಳ ಅನುಸರಣದಿಂದ ಜೀವನದ ಎಲ್ಲ ಮೌಲ್ಯಗಳ ಸಿದ್ಧಿ, ಇಹಪರಗಳಲ್ಲಿ ಶ್ರೇಯಸ್ಸು- ಎಂಬ ಬಗ್ಗೆ ಆಸ್ತಿಕರ ಮನಸ್ಸಿನಲ್ಲಿ ಎಂದೂ ಸಂಶಯವಿಲ್ಲ. ಇದು ಹೇಗೆ?

**ಡಾ॥ ಕೆ. ಕೃಷ್ಣಮೂರ್ತಿ**

"ವಾಲ್ಮೀಕಿಗಿರಿಸಂಭೂತಾ
ರಾಮಸಾಗರ ಗಾಮಿನೀ
ಪುನಾತು ಭುವನಂ ಪುಣ್ಯಾ
ರಾಮಾಯಣಮಹಾನದೀ ॥"

ಇದು ಭಾರತೀಯರೆಲ್ಲರ ಹೃತ್ಪೂರ್ವಕ ನಂಬಿಕೆ; ದೃಢವಾದ ಹಾರೈಕೆ! ನಿಜವಾಗಿ ರಾಮಾಯಣ ಒಂದು ಮಹಾನದಿ. ಅದು ಹುಟ್ಟುವ ಬೆಟ್ಟದಂತೆ ವಾಲ್ಮೀಕಿಗಳಿದ್ದಾರೆ. ಸಾವಿರಾರು ಕವಿಗಳಿಗೆ ಸ್ಫೂರ್ತಿದಾಯಿನಿಯಾಗಿ ಅನಂತ ಕಾಲದಿಂದಲೂ ಭಾರತವನ್ನು ಪಾವನಗೊಳಿಸುತ್ತಿರುವ ದಿವ್ಯಗಂಗೆಯೇ ರಾಮಾಯಣ. ಉತ್ತಮ ಜೀವನಾದರ್ಶ



# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲು | " | 55-00 |
| 5. | ಸಕ್ಕರೆಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | 90-00 |
| 8. | ಸೀರ | " | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಗಳು: ಉಜ್ವಲ ಧರ್ಮ, ಸುಂದರ ಜೀವನ ದೃಷ್ಟಿ, ಇವನ್ನೆಲ್ಲ ರಾಮಾಯಣದಂತೆ ಮನೋಹರವಾಗಿ, ಸ್ಫುಟವಾಗಿ, ಸಾರ ವತ್ತಾಗಿ ತೋರಿಸಿಕೊಡುವ ಮತ್ತೊಂದು ಮಹಾಕಾವ್ಯ ಭಾರತದಲ್ಲೇಕೆ, ವಿಶ್ವದಲ್ಲಿಯೇ ಎಲ್ಲಿಯೂ ಇಲ್ಲ. ಹೀಗೆ ಸಾವಿರಾರು ವರ್ಷ ಗಳ ಕಾಲ ಕೋಟಿಗಟ್ಟಲೆ ಜನರ ಜೀವನದ ಉಸಿರಾಗಿ, ಬಾಳಿಗೆ ಬೆಳಕಾಗಿರುವ ರಾಮಾ ಯಣಕ್ಕೆ ವ್ಯಾಸರ ಮಹಾಭಾರತವೊಂದೇ ಉಪಮಾನ. ಇವೆರಡೂ ಸುರಸರಸ್ವತಿಯ ಎರಡು ಕಣ್ಣುಗಳು, ರಾಷ್ಟ್ರೀಯ ಮಹಾ ಕಾವ್ಯಗಳೆಂಬ ಪಟ್ಟ ಇವೆರಡಕ್ಕೇ ಮೀಸಲು!

ವಾಲ್ಮೀಕಿ ಶ್ರೀಮದ್ರಾಮಯಣವನ್ನು ಬರೆದ ಮಹಾಕವಿ ಮಾತ್ರವಲ್ಲ; ರಾಮನಿಂದ ಪರಿತ್ಯಕ್ತೆಯಾದ ಸೀತೆಯನ್ನು ತನ್ನ ಆಶ್ರ ಮದಲ್ಲಿ ಕರೆತಂದು, ಸಂತವಿಟ್ಟು, ಸಲಹಿ, ಆಕೆಯ ಮಕ್ಕಳಾದ ಲವಕುಶರಿಗೆ ಸಾಕು ತಂದೆಯೂ ಗುರುವೂ ಆಗಿ. ಮೊತ್ತ ಮೊದಲು ರಾಮಾಯಣವನ್ನು ಹಾಡಲು ಅವ ರಿಗೆ ಕಲಿಸಿದವನು. ಕಡೆಗೆ ಸೀತೆಯನ್ನು ರಾಮನ ಬಳಿಗೆ ಮರಳಿ ಕರೆತಂದು ತನ್ನ ಅನುಕಂಪೆಯನ್ನು ಮೆರೆದವನು! ವಿಧಿವಿಲಾಸ ಬೇರೆಯೇ ಇತ್ತು, ಸೀತೆ ಭೂಮಿತಾಯಿ ಯಲ್ಲಿ ಐಕ್ಯಳಾದಳು. ಹೀಗೆ ವಾಲ್ಮೀಕಿ ಶ್ರೀ ರಾಮನ ಜೀವನದಲ್ಲಿ ಮುಖ್ಯ ಪಾತ್ರವನ್ನೂ ವಹಿಸಿದ್ದಾನೆ. ಶ್ರೀರಾಮನ ವಂಶವೃಕ್ಷ ಬೆಳೆ ದುದೇ ಆತನ ಕರುಣೆಯ ಅರುಣೋದಯ ದಿಂದ!

ವಾಲ್ಮೀಕಿಯ ಕು ಸು ಮ ಕೋ ಮ ಲ ಸ್ವಭಾವದ ಸಹಜಚಿತ್ರ ರಾಮಾಯಣದ ಆದಿಯಲ್ಲೇ ಕಾಣಬರುತ್ತದೆ ಕ್ರೌಂಚವಧೆಯ ಪ್ರಸಂಗದಲ್ಲಿ. ಒಮ್ಮೆ ಈ ಲೋಕದಲ್ಲಿ ಸರ್ವ ಗುಣಸಂಪನ್ನನಾದ ಆದರ್ಶ ಮಹಾಪುರುಷ ನೊಬ್ಬನಾದರೂ ಉಂಟೆ ಎಂಬ ಜಿಜ್ಞಾಸೆ ವಾಲ್ಮೀಕಿಯ ಮನಸ್ಸಿನಲ್ಲಿ ಮೂಡುತ್ತದೆ. ಅದೇ ಹೊತ್ತಿಗೆ ದೇವಮುನಿ ನಾರದ ಬಂದು ಶ್ರೀರಾಮನ ಕಥೆಯನ್ನು ಅರುಹಿ ಹೋಗು ತ್ತಾನೆ. ಅದನ್ನು ಕೇಳಿ ಸಂತುಷ್ಟನಾಗಿ ನದಿಗೆ ಸ್ನಾನಮಾಡಲು ಹೊರಟ ವಾಲ್ಮೀಕಿ ಪ್ರಶಾಂತಜಲವನ್ನು ಕಂಡೊಡನೆ ಸ್ನಾನಕ್ಕಿ ಳಿಯಲು ತೊಡಗುತ್ತಾನೆ. ಆಗ ಮರದ ಮೇಲೆ ನಲಿಯುತ್ತಿರುವ ಕ್ರೌಂಚಪಕ್ಷಿಗಳ ಜೋಡಿ ಕಾಣಬರುತ್ತದೆ. ಇದ್ದಕ್ಕಿದ್ದಂತೆ ಮುನಿಯ ಪ್ರಶಾಂತ ಮನಸ್ಸು ಕದಡು ವಂತೆ ಕರ್ಕಶ ಚೀತ್ಕಾರ ಹಿಂದಿನಿಂದ ಕೇಳಿ ಬರುತ್ತದೆ. ಮುನಿ ಹಿಂದಿರುಗಿ ನೋಡಿ ದಾಗ ಕಂಡ ಕರುಣಾಜನಕ ದೃಶ್ಯವಿದು; ಬೇಡನೊಬ್ಬನ ಬಾಣದೇಟಿಗೆ ಗಂಡುಹಕ್ಕಿ ಗುರಿಯಾಗಿ ಸತ್ತು ಬಿದ್ದಿದೆ. ಅದರ ರಕ್ತದ ಮಡುವಿನಲ್ಲಿ ಹೆಣ್ಣುಹಕ್ಕಿ ಹೊರಳುತ್ತಾ ಅಳುತ್ತಿದೆ! ತಟ್ಟನೆ ಮುನಿಯ ಹೃದಯ ನೀರಾಗಿ, ಅವನ ಅರಿವಿಗೂ ಬಾರದಂತೆಯೇ ಶ್ಲೋಕವೊಂದು ಎದೆಯಾಳದಿಂದ ಚಿಮ್ಮಿ ಹೊರಹೊಮ್ಮುತ್ತದೆ-

"ಮಾ ನಿಷಾದ ಪ್ರತಿಷ್ಠಾಂ
ತ್ವಮಗಮಃ ಶಾಶ್ವತೀಃ ಸಮಾಃ।
ಯತ್ಕ್ರೌಂಚಮಿಥುನಾದೇಕ
ಮವಧೀ ಕಾಮಮೋಹಿತಮ್ ॥"

(ಎಲೋ ಕ್ರೂರಿಯಾದ ಬೇಡನೆ! ನಿನ ಗೆಂದೂ ಒಳ್ಳೆಯದಾಗದೆ ಹೋಗಲಿ, ನಲಿವಿ ನಿಂದ ಮೈಮರೆತಿದ್ದ ಹಕ್ಕಿಗಳ ಜೋಡಿಯಲ್ಲಿ ನಿ ರ ಪ ರಾ ಧಿ ಯಾ ದ ಒಂದನ್ನು ಹೀಗೆ ಕೊಡೆದು ಕೊಂದ ಪಾಪಕ್ಕೆ ನಿನಗೆ ಶಿಕ್ಷೆ ಅದೇ!) ಒಂದು ಕ್ಷಣಕಾಲ ಕವಿಗೇ ಅಚ್ಚರಿ! ನನ್ನ ಬಾಯಿಂದ ಇದೇನು ಹೊರಹೊ ಮ್ಮಿತು? ಎಂದು. ಆಗ ಬ್ರಹ್ಮದೇವನೇ ಬಂದು 'ನೀನು ರಾಮಾಯಣ ಬರೆಯಲು ತಕ್ಕ ಛಂದಸ್ಸಿನ ಸೃಷ್ಟಿಯಾಯಿತೆಂದು' ಆದರ ರಹಸ್ಯವನ್ನು ವಿವರಿಸಿ ಅವನ ಕಾವ್ಯ ರಚನೆಯಶಸ್ವಿಯಾಗಲೆಂದು ಹರಸುತ್ತಾನೆ. 'ಭೂಮಿಯ ಮೇಲೆಎಲ್ಲಿಯವರೆಗೆಬೆಟ್ಟಗಳೂ ನದಿಗಳೂ ಹೀಗೆಯೇ ಇರುವುವೋ ಅಲ್ಲಿಯವ ರೆಗೂ ನಿನ್ನ ಕಾವ್ಯ ನಿರಂತರ ಪ್ರಚಾರ ಪಡೆ ಯಲಿ ಎಂಬುದೇ ಬ್ರಹ್ಮದೇವನ ಆಶೀ ರ್ವಾದ.

"ಯಾವತ್ ಸ್ಥಾಸ್ಯನ್ತಿ ಗಿರಯಃ
ಸರಿತಶ್ಚ ಮಹೀತಲೇ।
ತಾವದ್ರಾಮಾಯಣಕಥಾ
ಲೋಕೇಷು ಪ್ರಚರಿಷ್ಯತಿ ॥"

ಬ್ರಹ್ಮದೇವನ ವರ ಹುಸಿಹೋಗಿಲ್ಲವೆಂಬುದಕ್ಕೆ ಅಂದಿನಿಂದ ಇಂದಿನವರೆಗಿನ ಎಲ್ಲ ಭಾರತೀಯ ಭಾಷಾಸಾಹಿತ್ಯಗಳೇ ಸಾಕ್ಷಿ.

ಒಂದು ಕಥೆ ಹೃದಯವನ್ನು ಕುತೂಹಲದಿಂದ ತುಂಬಲು ಏನೆಲ್ಲ ಕಲೆಗಾರಿಕೆ ಇರಬೇಕೋ ಅದೆಲ್ಲ ರಾಮಾಯಣದ ಕಥಾಸೂತ್ರದಲ್ಲಿ, ಸಂವಿಧಾನದಲ್ಲಿ ಅಡಗಿದೆ. ಶ್ರೀರಾಮಾವತಾರದ ಅಗತ್ಯದ ಪೀಠಿಕೆ ಬಾಲಕಾಂಡವಾದರೆ, ಇನ್ನೇನು ಯುವರಾಜನಾಗಿ ಪಟ್ಟವನ್ನೇರುವ ಹೊತ್ತು ಬಂದಿತೆನ್ನುವಾಗಲೇ ಕೈಕೇಯಿಯ ಮನಸ್ಸು ಮಂಥರೆಯ ದುರ್ಯೋಜನೆಯಿಂದ ಕುರುಡಾಗಿ ಸಿಂಹಾಸನದ ಬದಲು ಹದಿನಾಲ್ಕು ವರ್ಷಗಳ ವನವಾಸ ರಾಮನಿಗೆ ಪ್ರಾಪ್ತವಾಗುತ್ತದೆ. ದಶರಥನು ಪುತ್ರಶೋಕದಿಂದ ಸಾಯುತ್ತಾನೆ. ಕೈಕೇಯಿಗೂ ವೈಧವ್ಯ ಬರುತ್ತದೆಯೇ ಹೊರತು ಭರತನ ಸದ್ಗುಣಗಳ ಪ್ರಭಾವದಿಂದ ಅವಳಿಗೆ ರಾಜಮಾತೆಯೆಂದು ಮೆರೆಯುವ ಹೆಬ್ಬಯಕೆ ಈಡೇರುವುದಿಲ್ಲ. ಅರಣ್ಯದಲ್ಲಿಯೂ ರಾಮನ ಧರ್ಮರಕ್ಷಣೆಯ ಪ್ರಜ್ಞಾಫಲವಾಗಿ ಅವನಿಗೆ ರಾಕ್ಷಸರ ವೈರ ಗಂಟು ಬೀಳುತ್ತದೆ, ಸುವರ್ಣಮೃಗದ ನೆವದಿಂದ ಮೆಚ್ಚಿನ ಮಡದಿ ಸೀತೆ ರಾವಣನ ಕೈಯಲ್ಲಿ ಸಿಕ್ಕು ಲಂಕೆಯಲ್ಲಿ ಪರಿತಪಿಸುವ ಪ್ರಸಂಗ ಬರುತ್ತದೆ. ರಾಮನೂ ಮನಶ್ಶಾಂತಿಯಿಲ್ಲದೆ ತೊಳಲುವಂತಾಗುತ್ತದೆ. ಅವಳನ್ನು ಕಾಯಲೆಂದು ಹಾರಿದ ಹಕ್ಕಿ ಜಟಾಯುವಿಗೂ ಮರಣವೇ. ಹೀಗೆ ಕಷ್ಟಗಳ ಮೇಲೆ ಕಷ್ಟವನ್ನು ಸಹಿಸಲೆಂದೇ ರಾಮನು ಜನ್ಮವೆತ್ತಂತೆ ಮೇಲ್ನೋಟಕ್ಕೆ ಭಾಸವಾಗುತ್ತದೆ.

ಆದರೆ ಭೂಭಾರವನ್ನಿಳುಹಲೆಂದು ಬಂದ ಪರಮಾತ್ಮನೇ ಶ್ರೀರಾಮನಷ್ಟೆ! ಅವನಿಗೆ ಎಂತಹ ದುಃಖವನ್ನೂ ಸಹಿಸುವ ಮನೋದಾರ್ಢ್ಯವಿದೆ. ತನ್ನ ಪ್ರಚಂಡ ಪರಾಕ್ರಮದಲ್ಲಿ ಅಚಲ ವಿಶ್ವಾಸವಿದೆ. ವಿಧಿಯೋಗದಿಂದ ಬದಗಿದ ಸುಗ್ರೀವ ಹನುಮಂತರ ಸಹಾಯದಿಂದ ಸೀತೆಯನ್ನು ಹುಡುಕಿದ್ದಷ್ಟೆ ಅಲ್ಲ, ಸಮುದ್ರಕ್ಕೇ ಸೇತುವೆ ಕಟ್ಟಿ, ಕಪಿಸೈನ್ಯವನ್ನು ಮುನ್ನಡೆಸಿ ರಾವಣನನ್ನು ಸಂಹರಿಸಿ. ಅಗ್ನಿಶುದ್ಧಿಯಾದ ಸೀತಾದೇವಿಯೊಂದಿಗೆ ಅಯೋಧ್ಯೆಗೆ ಮರಳಿ ಬಂದು, ಹದಿನಾಲ್ಕು ವರ್ಷದ ಗಡುವು ತೀರಿದ ದಿನವೇ ಭರತನಿಂದ ರಾಜ್ಯಭಾರವನ್ನು ವಹಿಸಿಕೊಳ್ಳುತ್ತಾನೆ! ಇದು ಎಲ್ಲರಿಗೂ ಗೊತ್ತಿರುವ ಕಥೆಯೇ, ಕಥೆಯ ಮುಖ್ಯ ಸೂತ್ರಗಳಲ್ಲಿ ಮುಂದೇನಾಗುವುದೆಂದು ತಿಳಿಯಲಾಗದಂತಹ ತಿರುವುಗಳಿರುವುದಷ್ಟೆ ಅಲ್ಲ, ಪ್ರಾಸಂಗಿಕ ಕಥೆಗಳಾದ ಸುಗ್ರೀವ-ತಾರೆ ವಾಲಿ ಇವರ ಪ್ರಸಂಗಗಳಲ್ಲೂ ಮುಖ್ಯ ಕಥೆಯ ಸಮಾನಾಂತರರೇಖೆಯಲ್ಲಿಯೇ ಸಾಗುವ, ಪತ್ನೀವಿಯೋಗ, ದೇಶಭ್ರಷ್ಟತೆಗಳ ಇನ್ನೊಂದು ರೂಪಾಂತರ, ಸುಗ್ರೀವನ ಮೂಲಕ ಅಭಿವ್ಯಕ್ತವಾಗುತ್ತದೆ. ಹೀಗೆ ಕಥೆಯ ಸೂತ್ರಗಳನ್ನು ರಚಿಸಿರುವುದು ದೊಡ್ಡ ಕಲೆಯ ದ್ಯೋತಕವಾಗಿದೆ, ಕಡೆಗೆ ಕೂಡ ಸೀತೆಯ ಪಾತ್ರ ಸುಖದ ಶಿಖರವನ್ನೇರುವಳೆಂದುಕೊಳ್ಳುವ ಕ್ಷಣದಲ್ಲೇ ದುಃಖದ ಪಾತಾಳಕ್ಕಿಳಿಯುವಂತೆ ಕಲೆಯ ಮುಗಿತಾಯವಿದೆ.

ಕಥಾಸೂತ್ರ ಸಂವಿಧಾನ ಕಲಾಪೂರ್ಣವಿರುವಂತೆಯೇ ರಾಮಾಯಣದ ಪಾತ್ರಚಿತ್ರಣವೂ ಅದ್ವಿತೀಯವಾಗಿದೆ. ಸ್ತ್ರೀ-ಪುರುಷರೆಂಬ ಭೇದವಿಲ್ಲದೆ, ಪಂಡಿತ ಪಾಮರರೆಂಬ ವ್ಯತ್ಯಾಸವಿಲ್ಲದೆ, ಉಚ್ಚ-ನೀಚರೆಂಬ ತಾರತಮ್ಯವಿಲ್ಲದೆ ಭಾರತದ ಪ್ರತಿಯೋರ್ವ ವ್ಯಕ್ತಿಯೂ ಆದರ ಪ್ರಭಾವಕ್ಕೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಒಳಗಾಗಿಯೇ ಇದ್ದಾನೆ ಎನ್ನಬಹುದು. ತನ್ನ ಸ್ವಂತ ಜೀವನದ ಸುಖ—ದುಃಖಗಳ ಪ್ರತಿಬಿಂಬವನ್ನು ರಾಮಾಯಣದ ಪಾತ್ರಗಳ ಬಾಳಲ್ಲಿ ಕಂಡು, ಅಲ್ಲಿಂದ ಬಂದ ಬೆಳಕಿನಿಂದ ತನ್ನ ಬಾಳನ್ನು ಬೆಳಗಿಸಿಕೊಳ್ಳಲು ಹವಣಿಸುತ್ತ ಬಂದಿದ್ದಾನೆ. ಕವಿಯ ಮೂಲ ಉದ್ದೇಶವೂ ಅದೇ ಆಗಿತ್ತೆಂದು ಊಹಿಸುವಂತಿದೆ. ಇದೇ ಶ್ರೀಮದ್ರಾಮಾಯಣದ ಮಹೋನ್ನತಿ ಮತ್ತು ಮಹಿಮೋನ್ನತಿ.

ಆದರ್ಶನಾದ ತಂದೆ. ಆದರ್ಶ ತಾಯಿ, ಆದರ್ಶ ಸೋದರ, ಆದರ್ಶ ಪತ್ನಿ, ಆದರ್ಶ ರಾಜ, ಆದರ್ಶ ಪ್ರಜೆ, ಆದರ್ಶ ಸೇವಕ ಆದರ್ಶಗೆಳೆಯ—ಹೀಗೆ ಎಷ್ಟೋ ಬಗೆಬಗೆಯ ಆದರ್ಶ ಪಾತ್ರಗಳನ್ನು, ಮೌಲ್ಯಗಳನ್ನು ಮರೆಯದೆ. ಇದಕ್ಕಾಗಿ ಮಹಾತ್ಯಾಗಕ್ಕೂ ಸಿದ್ಧರಾದ ಉದಾತ್ತ ವ್ಯಕ್ತಿಗಳನ್ನು ಚಿತ್ರಿಸುವುದು ಕವಿಯ ಪ್ರಧಾನ ಧ್ಯೇಯ. ಭಾರತೀಯ ಸಂಸ್ಕೃತಿಯಲ್ಲಿ ವಿಶಿಷ್ಟವಾಗಿರುವ ಆದರ್ಶ ಗೃಹಸ್ಥಜೀವನದ ಜೀವಂತ ಚಿತ್ರಣವನ್ನು ಕೊಡುವುದೇ ಕವಿಯ ಆಶಯ. ಮನೆಯನ್ನು ಗೆದ್ದು ಮಾರನ್ನೂ ಗೆಲ್ಲಬಹುದು. ಮನೆಯಲ್ಲಿಯೇ ವಿರಸ ಶುರುವಾದರೆ ಅದು ಸಾಮಾಜಿಕ, ರಾಜಕೀಯ ಸ್ತರಗಳನ್ನೂ ಅಸ್ತವ್ಯಸ್ತಗೊಳಿಸಿ ಲೋಕಶಾಂತಿಗೇ ಸಂಚಕಾರ ತರಬಲ್ಲದು. ಈ ನೀತಿಯನ್ನು ವಿಭಿನ್ನ ರೀತಿಗಳಿಂದ ಅಯೋಧ್ಯೆ, ಕಿಷ್ಕಿಂಧೆ ಲಂಕೆಗಳಲ್ಲಿಯ ಪ್ರಾತಿನಿಧಿಕ ಪಾತ್ರಗಳ ಮೂಲಕ ಮಹಾಕವಿ ಮನಗಾಣಿಸಿದ್ದಾನೆ.

ರಾಮಾಯಣದ ಕಥಾವಸ್ತು ಮೂಲತಃ ಇಹಲೋಕದಲ್ಲಿ ಹೇಳಿಕೇಳಿ ಯಾರು ಬೇಕಾದರೂ ಅನುಭವಿಸಬಹುದಾದಂಥದು, ಅತಿಮಾನುಷ ಘಟನೆಗಳ ಕಲ್ಪನೆ ಸಾಮಾನ್ಯಜನರ ಮನಸ್ಸನ್ನೂ ಅದ್ಭುತರಸದಿಂದ ಆಕರ್ಷಿಸುವುದಕ್ಕಾಗಿದೆಯೇ ಹೊರತು, ಅದೇ ವಸ್ತುಸತ್ಯವೆಂದಲ್ಲ. ರಾಮಾಯಣದ ಪಾತ್ರಗಳು ಒಂದೊಂದೂ ಮಾನವಲೋಕಕ್ಕೆ ಸಹಜವಾದ ಸುಖದುಃಖಗಳನ್ನು ಅನುಭವಿಸುತ್ತಲೇ ಮಾನವತ್ವದಿಂದ ದೇವತ್ವಕ್ಕೆ ಏರುವಂತಹ ಶ್ರೇಷ್ಠ ಘನತೆಗಳಿಂದ ಕಾಂತಿಮಯವಾಗಿವೆ. ಸರಳವಾದ ಭಾಷೆ, ರಸಭಾವ ತರಂಗಿತರಾದ ಘನಗಂಭೀರ ಪಾತ್ರಗಳು, ಕಾಲದೇಶಾತೀತವಾಗಿ ಸರ್ವರಿಗೂ ಸಮಾನವಾಗಿ ಅನ್ವಯಿಸಬಲ್ಲ ಉದಾತ್ತ ಜೀವನ ಸಂದೇಶ—ಇವುಗಳಿಂದ ಸಮ್ಮಿಳಿತವಾದ ಆದಿಕಾವ್ಯ ಸಾಹಿತ್ಯದೃಷ್ಟಿಯಿಂದ ಅದ್ವಿತೀಯವಾಗಿದೆ; ಧಾರ್ಮಿಕದೃಷ್ಟಿಯಿಂದ ಪ್ರಮಾಣ ಗ್ರಂಥವಾಗಿದೆ. ಭಕ್ತಿಯ ಮಹಿಮೆಯನ್ನು ಸಾರುವ ಭಗವಂತನ ಅಪಾರಕೃಪೆಯ ನಿದರ್ಶನ ಗ್ರಂಥವೂ ಆಗಿದೆ.

ನಾಯಕನೂ ಆದರ್ಶಮಾನವನೂ ಆದ ಶ್ರೀರಾಮನ ಪಾತ್ರರಚನೆ ಅದ್ಭುತವಾಗಿದೆ.

"ವಜ್ರಾದಪಿ ಕಠೋರಾಣಿ
ಮೃದೂನಿ ಕುಸುಮಾದಪಿ।
ಲೋಕೋತ್ತರಾಣಾಂ ಚೇತಾಂಸಿ
ಕೋ ಹಿ ವಿಜ್ಞಾತುಮರ್ಹತಿ॥"

ಎಂಬ ಮಾತಿನ ಪ್ರತ್ಯಕ್ಷ ಪ್ರತೀಕವೇ ಶ್ರೀರಾಮ. ಒಮ್ಮೆ ವಜ್ರಕ್ಕಿಂತ ಅವನ ಹೃದಯ ಕರ್ಕಶವೆನಿಸುತ್ತದೆ-ಸೀತಾಪರಿತ್ಯಾಗ ಕಾಲದಲ್ಲಾದಂತೆ; ಇನ್ನೊಮ್ಮೆ ಹೂವಿಗಿಂತಲೂ ಕೋಮಲವೆನಿಸುತ್ತದೆ. ಅದೇ ಸೀತೆಯನ್ನು ನೆನೆದು ಅವನು ಹಳಹಳಿಸುವಾಗ. ಲೋಕೋತ್ತರರಾದ ಮಹಾಪುರುಷರ ಸ್ವಭಾವ ಹೀಗೆ ಅನೇಕ ವಿರೋಧಗಳ ಸಂಗಮವಾಗಿರುತ್ತದೆ. ಹೀಗೆಯೇ ಸೀತಾದೇವಿಯ ಪಾತಿವ್ರತ್ಯ, ಲಕ್ಷ್ಮಣನ ಭ್ರಾತೃಪ್ರೇಮ, ಭರತನ ಪ್ರೇಮನಿಷ್ಠೆ, ಸುಗ್ರೀವನ ಸಖ್ಯ, ಹನುಮಂತನ ಕೈಂಕರ್ಯ, ವಿಭೀಷಣನ ಪ್ರಪತ್ತಿ, ರಾವಣನ ಆತ್ಮಪ್ರತ್ಯಯ, ಕೌಸಲ್ಯೆಯ ಪುತ್ರವಾತ್ಸಲ್ಯ, ಶೂರ್ಪಣಖಿಯ ಚಿತ್ತಚಾಂಚಲ್ಯ, ಮಂಥರೆಯ ಕುಬುದ್ಧಿ, ದಶರಥನ ಧರ್ಮಸಂಕಟ-ಮೊದಲಾದವು ಕವಿಯ ಪ್ರತಿಭಾದರ್ಶದಲ್ಲಿ ಬಿಂಬಿಸಿ ವರ್ಣಮಯವಾಗಿಯೂ ಶ್ಲಾಘನೀಯವಾಗಿಯೂ ಮಾಡಿಬಂದಿವೆ.

ಯಾವ ಪಾತ್ರವನ್ನು ಚಿತ್ರಿಸುವಾಗಲೂ ಆದಿಕವಿ, ಅವನು ಮೊದಲು ಮಾನವನೆಂಬುದನ್ನು ಮರೆತಿಲ್ಲ. ಎಲ್ಲವನ್ನೂ ಧರ್ಮದ ಒರೆಗಲ್ಲಿನ ಮೇಲೆ ತಿಕ್ಕಿನೋಡಿ ಚೊಕ್ಕ ಚಿನ್ನವನ್ನಷ್ಟೇ ಎತ್ತಿ ತೋರಿಸಿದ್ದಾನೆ. ಜೀವನದಲ್ಲಿ ಧರ್ಮಕ್ಕೆ ಕೇಂದ್ರಸ್ಥಾನವೆಂದು ನಿದರ್ಶನಗಳ ಮೂಲಕ ಸ್ಥಾಪಿಸಿದ್ದಾನೆ. ಅರ್ಥ-ಕಾಮಗಳು ಸ್ವತಂತ್ರವಾಗಿ ಪುರುಷಾರ್ಥಗಳಾಗವು, ಅವು ಧರ್ಮಕ್ಕೆ ಅಧೀನವಾಗಿರುವವರೆಗೆ ಮಾತ್ರ ಸುಖಪ್ರದವಾಗಬಲ್ಲವು. ಧರ್ಮಕ್ಕೆ ಅವು ವಿರೋಧಿಗಳಾಗಿ ಧರ್ಮವನ್ನು ಬಿಟ್ಟು ಉಲ್ಬಣಾವಸ್ಥೆ ಮುಟ್ಟಿದಾಗ ವ್ಯಕ್ತಿಯ ಹಾಗು ಸಮಾಜದ ಪತನಕ್ಕೇ ಅವು ಕಾರಣೀಭೂತವಾಗುತ್ತವೆ. ಕೆಲವೊಮ್ಮೆ ಎರಡು ಧರ್ಮಗಳಿಗೇ ಘರ್ಷಣೆ ಬಂದು ಮನುಷ್ಯನನ್ನು ಧರ್ಮಸಂಕಟದಲ್ಲಿ ಕೆಡವಬಹುದು. ಯಾವ ಒಂದನ್ನು ಅವಲಂಬಿಸಿದರೂ ಅನರ್ಥವನ್ನು ತಪ್ಪಿಸಲು ಬಾರದು. ಅದು ವಿಧಿವಿಪರ್ಯಾಸ. ದಶರಥನಿಗೆ ಆದದ್ದೇ ಹೀಗೆ. ಆಗ ಅದನ್ನು ಜೀವನದ ಸಹಜಗತಿಯೆಂದೇ ಅರಿತು ತಾಳ್ಮೆಯಿಂದ ಅನುಭವಿಸಬೇಕು. ತಾಳಿದವನು ಬಾಳಿಯಾನು ಎಂಬುದೇ ರಾಮಾಯಣದ ನಿತ್ಯನೂತನ ಜೀವನಸಂದೇಶ, ಸುಖಜೀವನದ ಪರಮ ಸಂಜೀವನವೆಂದರೆ ಕಷ್ಟದಲ್ಲಿಯೂ ತಾಳ್ಮೆ! " ಜೀವನ್ ಭದ್ರಾಣಿ, ಪಶ್ಯತಿ " " ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ". ತಾಳ್ಮೆಯಿಂದ ಇದ್ದವನಿಗೆ, ಸಾಯುವುದರೊಳಗೆ ಒಮ್ಮೆಯಾದರೂ ಸುಖಕಾಲ ಬಂದೇ ತೀರುವುದೆಂಬ ಆಶ್ವಾಸನೆ, ಆಶಾವಾದ ವಾಲ್ಮೀಕಿಗಳದು. ರಾಮಾಯಣದ ಸುಭಾಷಿತಗಳಲ್ಲಿ ಅನೇಕವೇಳೆ ಈ ಸಂದೇಶ ಎದ್ದು ಕಾಣುತ್ತದೆ. ಇದು ಸದಾಕಾಲಕ್ಕೂ ಮಾರ್ಗದರ್ಶಕವಾಗಿದೆ. ಜೀವನ ಸವಿಯಾಗಲು ಶೀಲ ಬಹಳ ಮುಖ್ಯವೆಂಬುದನ್ನು ತೋರಿಸಲಾಗಿದೆ. ಎಲ್ಲಕ್ಕೂ ಹೆಚ್ಚಾಗಿ, ಕರ್ತವ್ಯನಿಷ್ಠೆಯನ್ನು ಅತ್ಯಮೂಲ್ಯವಾದ ಮೌಲ್ಯವನ್ನಾಗಿ ಚಿತ್ರಿಸಲಾಗಿದೆ.

ವಾಲ್ಮೀಕಿಯ ಜೀವನಸಂದೇಶ ಇಂದಿಗೂ ಮನನೀಯವಾಗಿದೆ. ಜೀವನವನ್ನು ಉದಾತ್ತಗೊಳಿಸಲು, ಸಾರ್ಥಕಪಡಿಸಲು ಧರ್ಮವೇ ಪರಮಸಾಧನ. ಧರ್ಮಶ್ರದ್ಧೆಯೇ ಮಹಾಪುರುಷನ ಮೊದಲ ಗುಣ. ಧರ್ಮಕ್ಕೆ ಅರ್ಥ-ಕಾಮಗಳೇ ವೈರಿಗಳು. ರಾಮನು ಹಿಡಿದುದು ಧರ್ಮಮಾರ್ಗ. ಕೈಕೇಯಿಯದು ಅರ್ಥಮಾರ್ಗ. ರಾವಣದು ಕಾಮಮಾರ್ಗ. ಆಪಾತತಃ ಅರ್ಥಕಾಮಗಳೇ ಗೆದ್ದಂತೆ ಕಂಡರೂ, ಕಡೆಗೆ ವಿಜಯ ಧರ್ಮಕ್ಕೇ ಕಟ್ಟಿಟ್ಟದ್ದು. ಧರ್ಮಕ್ಕೆ ಅವಿರುದ್ಧವಾಗಿ ಅರ್ಥಕಾಮಗಳನ್ನು ಸೇವಿಸುವುದೇ ಸುಸಂಸ್ಕೃತ ಮಾನವನ ಧ್ಯೇಯವಾಗಬೇಕು. ಅರ್ಥಕಾಮಗಳ ಉರುಬಿನಲ್ಲಿ ಹುಟ್ಟುವ ಸ್ವಾರ್ಥವು ಇತರರನ್ನು ದುಃಖದಲ್ಲಿ ಮುಳುಗಿಸುತ್ತದೆ, ಸ್ವಕಾರ್ಯವನ್ನೂ ಕೆಡಿಸುತ್ತದೆ, ಶ್ರೀರಾಮನು ಧೀರೋದಾತ್ತನೂ ಲೋಕವಂದ್ಯನೂ ಆಗುವುದಕ್ಕೆ ಅವನ ಧರ್ಮನಿಷ್ಠೆಯೇ ಮುಖ್ಯಕಾರಣ. ಆದರೆ ಧರ್ಮಾಚರಣೆಯಿಂದ ಸುಖವೊಂದೇ ಬರುವುದೆಂಬ ನಿಯಮವೇನೂ ಇಲ್ಲ. ದುಃಖವೂ ಬಂದೇ ಬರುವುದು, ದುಃಖ ಬಂದರೂ ಧೃತಿಗೆಡದೆ ಅದನ್ನು ಸಹಿಸುವ ಧೈರ್ಯವನ್ನು ಧರ್ಮ ನೀಡುತ್ತದೆ. ರಾಮನಿಗೆ ಪಿತೃವಾಕ್ಯದ ಪರಿಪಾಲನೆ ಧರ್ಮ, ಭರತನ ಕೋರಿಕೆಯನ್ನು ನಡೆಸುವುದೂ ಧರ್ಮ. ಮೊದಲನೆಯದನ್ನು ಆಯ್ದುಕೊಂಡ ರಾಮನಿಗೆ ಸೀತಾವಿರಹಾದಿ ದುಃಖಗಳು ಬಂದವು. ಆದರೂ ಅಂತಹ ಧರ್ಮಸಂಕಟದ ಪ್ರಸಂಗಗಳಲ್ಲಿ ಮಹಾತ್ಮರು ಸ್ವಾರ್ಥಕ್ಕೆ ಬಲಿಬೀಳದೆ ಪರಾರ್ಥವನ್ನೇ ಆಯ್ದುಕೊಂಡು ತಮ್ಮ ಮಹಿಮೆಯನ್ನು ಬೆಳಗುತ್ತಾರೆ.

ಇಂತಹ ಅಮರ ಧರ್ಮಸಂದೇಶವನ್ನೂ ನೀತಿವಾಕ್ಯಾಮೃತವನ್ನೂ ಒಳಗೊಂಡ ರಾಮಾಯಣ 'ಶತಕೋಟಿ-ಪ್ರವಿಸ್ತರ'ವಾಗಿ ಎಲ್ಲ ಭಾಷೆಗಳಲ್ಲಿಯೂ ಶಾಖೋಪಶಾಖೆಗಳನ್ನು ತಳೆದು ಬೆಳೆದಿರುವುದು ಅದರ ಸತ್ತ್ವದ ದ್ಯೋತಕ. ಯಾವ ರೂಪಾಂತರವೇ ಇರಲಿ, ರಾಮಾಯಣದ ಅರಿವು ನಮ್ಮನ್ನು ಶಾಂತಿಯತ್ತ ಒಯ್ಯುವ ನೌಕೆಯಾಗಬಲ್ಲದು, ಒಂದೊಂದು ಮಾತು ನಮ್ಮ ಪಾಪವನ್ನು ನೀಗಬಲ್ಲದು. ಅದರ ಪ್ರಚಾರ ವಿಚಾರ-ಆಚರಣೆ ನಮ್ಮಲ್ಲಿ ಉಳಿದು ಬೆಳೆಯಲೆಂದು ಹಾರೈಸೋಣ.



# ಶ್ರೀರಾಮ ನಾಮಾಮೃತ

ಧರೆಯೊಳಗ್ಗದ ರಘುವೇಂದ್ರನ ।
ಚರಿತೆ ಶತಕೋಟಿ ಪ್ರವಿಸ್ತರ ।
ಪರಮಹಾಚಾರಿತ್ರ ರಸನಾ
ಸುಪ್ರಬಂಧದಲಿ ॥
ಪರಮಭಕ್ತಿಯೊಳಾವನೊಂದ ।
ಕ್ಷರವ ಕೇಳ್ದ ನರಂಗೆ ಪಾತಕ ।
ಹರಿವುದೆಂದು ಕುಮಾರರಿಗೆ ವಾಲ್ಮೀಕಿ
ಮುನಿ ನುಡಿದ ॥

ನಮ್ಮ ಮನೆಗಳಲ್ಲಿ ರಾಮಾಯಣ ಮಹಾಭಾರತಗಳಿವೆಯೇ ಎಂದು ನಮ್ಮನ್ನು ನಾವು ಕೇಳಿಕೊಂಡರೆ ಬಹುತೇಕ ಭಾರತೀಯರೂ ಸಹ ಇವೆ ಎಂದು ಹೇಳಲಾರರು. ರಾಮಾಯಣ ಮಹಾಭಾರತಗಳೇ ಭಾರತೀಯರ ಚಿರಸ್ಥಾಯಿಯಾದ ಆಸ್ತಿ ಎಂಬುದನ್ನು ಭಾರತೀಯರು ಮರೆತಿದ್ದಾರೆ. ಅದು ಸ್ಮರಣೆಗೆ ಬರುವವರೆಗೂ, ಇಂದು ದೇಶದ ಮೂಲೆ ಮೂಲೆಯಲ್ಲಿಯೂ ವ್ಯಾಪಿಸಿರುವ ಭ್ರಷ್ಟಾಚಾರ, ವಂಚನೆ, ಅಸೂಯೆ, ದುರಾಸೆಗಳು ನಮ್ಮನ್ನು ಬಿಟ್ಟು ಹೋಗಲಾರವು. ಧರ್ಮದ ಹಿನ್ನೆಲೆ ಮತ್ತು ಧಾರ್ಮಿಕ ಪುಸ್ತಕಗಳ ಅಧ್ಯಯನ ಇವುಗಳನ್ನು ನಮ್ಮ ಜೀವನದಲ್ಲಿ ಅಳವಡಿಸುವುದರಿಂದ ಮಾತ್ರವೇ ನಾವು ನಿಜವಾದ ಭಾರತೀಯರಾಗುತ್ತೇವೆ. ರಾಮಾಯಣವು ಪವಿತ್ರತಮವಾದದ್ದು. ಈ ರಾಮಾಯಣದ ಅನುದಿನ ಶ್ರವಣ ಕೀರ್ತನವು ಮಾನವನನ್ನು ಮಹಾಪಾಪಗಳಿಂದಲೂ, ದ್ರೋಹ ಕೃತ್ಯಗಳಿಂದಲೂ, ವಿಮುಕ್ತಿಗೊಳಿಸುವುದು. ಪಾರಲೌಕಿಕವಾದ ಸದ್ಗತಿಯು ಸಿಕ್ಕುವುದು ಮಾತ್ರವಲ್ಲದೆ ಇಹದಲ್ಲಿಯೂ ಸಹ ರಾಮಾಯಣದ ಪಠನೆಯಿಂದ ವರ್ಣಾಶ್ರಮಗಳಿಗನುಸಾರವಾದ ಫಲವನ್ನು ಮನುಷ್ಯನು ಪಡೆಯುತ್ತಾನೆ. ಪ್ರಪಂಚದಲ್ಲಿನ ಸಮಸ್ತ ಗ್ರಂಥಗಳಲ್ಲಿಯೂ ಅತ್ಯುತ್ತಮವೆನಿಸಿಕೊಂಡಿರುವ ಶ್ರೀಮದ್ರಾಮಾಯಣ ಧರ್ಮ, ನ್ಯಾಯ, ನೀತಿಗಳ ಭಂಡಾರವೆನಿಸಿದೆ. ಸಂಗೀತಗಾರನು ಹಾಡುವುದಕ್ಕೆ ಮುಂಚೆ ವಾದ್ಯಗಳನ್ನು ಶೃತಿ ಮಾಡಿಕೊಳ್ಳುವಂತೆ ನಾವು ದೊಡ್ಡ ಗ್ರಂಥಗಳನ್ನು ವ್ಯಾಸಂಗ ಮಾಡುವುದಕ್ಕೆ ಮುಂಚೆ ಮನಸ್ಸನ್ನು ಹದಪಡಿಸಿಕೊಂಡು ಸರಿಯಾದ ಮನೋಭಾವದಿಂದ ಕಾರ್ಯಾರಂಭ ಮಾಡಬೇಕು. ವ್ಯವಹಾರದಲ್ಲಿಯೂ, ಸಂಸಾರದಲ್ಲಿಯೂ, ಗಂಡಹೆಂಡತಿಯರು, ತಂದೆ ತಾಯಿಗಳೂ, ತಂದೆಮಕ್ಕಳೂ, ಹೇಗೆ ನಡೆದುಕೊಳ್ಳಬೇಕೆಂಬ ಲೋಕಮರ್ಯಾದೆಯನ್ನು ತಿಳಿಸುವುದು ಶ್ರೀಮದ್ರಾಮಾಯಣ. ಗುರ್ವಾಜ್ಞೆಯನ್ನು ಪಾಲಿಸುವುದು ಶಿಷ್ಯನ ಧರ್ಮ, ಬಾಲಕರನ್ನು ಕಾಪಾಡಿ ಗುಣವಂತರನ್ನಾಗಿ ಮಾಡುವುದು ತಂದೆಗೆ ಧರ್ಮವು, ಗುರು ಶಿಷ್ಯರೂ, ತಂದೆಮಕ್ಕಳೂ, ಗಂಡ ಹೆಂಡಿರೂ, ಅಣ್ಣತಮ್ಮಂದಿರು ಹೇಗೆ ವರ್ತಿಸಬೇಕೆಂಬುದನ್ನು ಈ ಧರ್ಮಗ್ರಂಥವು ವಿಶದವಾಗಿ ತಿಳಿಸುತ್ತದೆ. ಮಹರ್ಷಿ ವಾಲ್ಮೀಕಿಯ ಅಮರ ಕಾವ್ಯ ಶ್ರೀಮದ್ರಾಮಾಯಣ.

ಪಾಪಪರಿಹಾರಕವಾದದ್ದು ರಾಮನಾಮ. ಕಲಿಯುಗದಲ್ಲಿ ಶ್ರೀರಾಮನಾಮ ಜಪಕ್ಕಿಂತಲೂ ಸುಲಭವೂ, ಶೀಘ್ರ ಫಲದಾಯಕವೂ ಆದ ಮುಕ್ತಿಸಾಧನವಿಲ್ಲವೆಂಬುದು ಮಹರ್ಷಿಗಳ ಮತ. ವೇದ ಶಾಸ್ತ್ರಾಭ್ಯಾಸಮಾಡಿ, ಘನ ವಿದ್ವಾಂಸರೆನ್ನಿಸಿಕೊಂಡವರಾದರೂ ಪರಬ್ರಹ್ಮಸ್ವರೂಪಿಯಾದ ಶ್ರೀರಾಮಚಂದ್ರನ ಅಡಿದಾವರೆಗಳಲ್ಲಿ ಭಕ್ತಿಭಾಗ್ಯವನ್ನುಗಳಿಸದಿದ್ದರೆ, ಆ ವಿದ್ಯಾ ವೈಭವವೆಲ್ಲವೂ ಅರಣ್ಯದಲ್ಲಿ ಕಾಯ್ದ ಬೆಳದಿಂಗಳಂತೆ ನಿರರ್ಥಕವಾಗುವುದು, ನಿರಕ್ಷರ ಕುಕ್ಷಿಯಾಗಿದ್ದರೂ ಯಾವನ ಹೃದಯದಲ್ಲಿ ಶ್ರೀರಾಮಸ್ವಾಮಿಯ ಪವಿತ್ರ ಪಾದಯುಗ್ಮವು ನೆಲೆಗೊಂಡಿರುವುದೋ ಅವನು ಉಜ್ಜ್ವಲಶಕ್ತಿ ಕಾಂತಿಯಿಂದ ಬೆಳಗಿ ಲೋಕಾನಂದಕರನಾಗಿರುವನು. ಶ್ರೀರಾಮಮಂತ್ರ ಜಪದ ಬಲದಿಂದಲೇ ಮಹಾ ಪಾಪಿಯಾಗಿದ್ದ ವ್ಯಾಧನು ತನ್ನ ಸಕಲ ಪಾಪಗಳನ್ನೂ ನಿವೃತ್ತಿಗೊಳಿಸಿಕೊಂಡು, ಮಹರ್ಷಿಗಳಲ್ಲಿ ಅಗ್ರಗಣ್ಯನಾಗಿ ರಾಮಾಯಣವೆಂಬ ಆದಿಕಾವ್ಯ ಗ್ರಂಥವನ್ನು ರಚಿಸಿ, ತನ್ಮೂಲಕ ಜಗತ್ತನ್ನೇ ಪಾವನಗೊಳಿಸಲು ಶಕ್ತನಾದನು.

ಶ್ರೇಷ್ಠವಾದ ತಾರಕಮಂತ್ರ ಶ್ರೀರಾಮನಾಮ. ಕೈಲಾಸಾಧಿಪತಿ ಶಂಕರ ಪಾರ್ವತಿಗೆ ಉಪದೇಶಮಾಡಿದ ಶ್ರೇಷ್ಠಮಂತ್ರ ರಾಮನಾಮ. "ಶ್ರೀರಾಮರಾಮ ರಾಮೇತಿ ರಮೇ ರಾಮೇ ಮನೋರಮೆ ॥ ಸಹಸ್ರನಾಮ ತತ್ತುಲ್ಯಂ ಶ್ರೀರಾಮನಾಮ ವರಾನನೆ''

"ಓಂ ನಮೋ ನಾರಾಯಣಾಯ'' ಎಂಬ ಅಷ್ಟಾಕ್ಷರೀ ಮಹಾಮಂತ್ರದಲ್ಲಿನ ಜೀವಾಕ್ಷರವಾದ "ರಾ" ಎಂಬ ಅಕ್ಷರವೂ, "ಓಂ ನಮಃ ಶಿವಾಯ'' ಎಂಬ ಪಂಚಾಕ್ಷರೀ ಮಂತ್ರದಲ್ಲಿನ ಜೀವಾಕ್ಷರವಾದ "ಮ'' ಎಂಬಕ್ಷರವೂ ಸೇರಿ "ರಾಮ'' ಎಂಬ ಶ್ರೇಷ್ಠ ತಾರಕಮಂತ್ರವಾಯಿತು. ರಾಮಮಂತ್ರ ಪಠನೆಯಿಂದ ಕಾಮಿತಾರ್ಥಗಳೆಲ್ಲವೂ ಸಿದ್ಧಿಸುವುವು. ಭೋಗಾರ್ಥಿಗಳಿಗೆ ಭೋಗ, ಮೋಕ್ಷಾರ್ಥಿಗಳಿಗೆ ಮೋಕ್ಷ. ಮನೋಭೀಷ್ಟಗಳೆಲ್ಲ ಸಿದ್ಧಿಸಿ ನಿರತಿಶಯ ಕ್ಷೇಮದಲ್ಲಿ ಬಾಳುತ್ತಾನೆ, ಪುಣ್ಯ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಜೀವಿ ಎನಿಸಿ ಪರಲೋಕ ಸುಖವನ್ನು ಸೂರೆ ಮಾಡುತ್ತಾನೆ, ರಾಮಮಂತ್ರ ಪಠನದಿಂದ ದುರ್ಬಲನು ಪ್ರಬಲನಾಗುವನು, ಬಡವನು ಭಾಗ್ಯವಂತನಾಗುವನು, ಹೆಳವನು ಬೆಟ್ಟವನ್ನೇ ಹಾರಬಲ್ಲ ಶಕ್ತನಾಗುವನು,ಮೂಕನು ವಾಗ್ಮಿಯಾಗುವನು, ಮೂಢನು ಪಂಡಿತನಾಗುವನು.

ರಾಮನಾಮದ ಶಕ್ತಿಯಿಂದ ಸೇತು ಬಂಧನ ಕಾಲದಲ್ಲಿ ಕಲ್ಲು ಕಡಲಿನಲ್ಲಿ ತೇಲಿತು, ರಾಮನಾಮ ಸಾಮರ್ಥ್ಯದಿಂದಲೇ ಕಪಿ, ಕರಡಿಗಳು ದೇವತೆಗಳಿಂದಲೂ ಸಾಧ್ಯವಿಲ್ಲವೆಂಬಂತಹ ಕಾರ್ಯಗಳನ್ನು ಸಾಧಿಸಿ ದಾನವರ ಕುಲವನ್ನು ಧ್ವಂಸಗೊಳಿಸಲು ಶಕ್ತರಾದರು.

ಭಕ್ತಿ ಪೂರ್ವಕ ರಾಮಧ್ಯಾನ ಮಾಡುವ ಸಾಧಕನಿಗೆ ಲೋಕದಲ್ಲಿ ಅಸಾಧ್ಯವಾದ ಕಾರ್ಯವೇ ಇರಲಾರದು. ಶ್ರೀರಾಮ ನಾಮದ ಬಲದಿಂದ ಆಂಜನೇಯನು ಶತ ಯೋಜನ ವಿಸ್ತಾರದ ವಾರಧಿಯನ್ನು ದಾಟಿ ಏಕಾಂಗಿಯಾಗಿ, ನಿರಾಯುಧನಾಗಿ ದಾನವ ಕೋಟಿಯನ್ನೆದುರಿಸಲು ಶಕ್ತನಾದನು.

ವಾಲ್ಮೀಕಿ ಮಹರ್ಷಿಗಳಿಂದ ಉಪದೇಶಿಸಲ್ಪಟ್ಟ ರಾಮಮಂತ್ರ ಪಠನಾಭ್ಯಾಸ ಬಲದಿಂದ ಲವಕುಶರು, ಸಮಸ್ತ ಸೈನ್ಯವನ್ನೂ ಕೊನೆಗೆ ಶ್ರೀರಾಮನನ್ನೂ ಎದುರಿಸಲು ಶಕ್ತರಾದರು.

ಲೋಕಶಿಕ್ಷೆಗಾಗಿಯೂ, ದುಷ್ಟಶಿಕ್ಷಣ, ಶಿಷ್ಟರಕ್ಷಣ ಕಾರ್ಯಕ್ಕಾಗಿಯೂ, ಲೋಕರಕ್ಷಣ, ಸಾಧುಸಂರಕ್ಷಣಾರ್ಥವಾಗಿಯೂ, ಅವತಾರಮಾಡಿ ಬಂದ ಮಹಾ ವಿಷ್ಣುವೇ ಶ್ರೀರಾಮನು.

ವಾಲ್ಮೀಕಿ ಗಿರಿಯಲ್ಲಿ ಹುಟ್ಟಿ ರಾಮ ಸಾಗರವನ್ನು ಕುರಿತು ಹರಿಯುವ ಪುಣ್ಯಪ್ರದ ರಾಮಾಯಣ ಮಹಾನದಿಯು ಭುವನವನ್ನು ಪವಿತ್ರವನ್ನಾಗಿ ಮಾಡಲಿ.

**ಲಕ್ಷ್ಮೀನಾರಾಯಣ**

**ಹರಿದಾಸವಾಣಿ**

ಜಗನ್ನಾಥದಾಸರ

# ತಾತ್ವಿಕ ಪ್ರಮೇಯಗಳು

‘ಸುಲಿದ ಬಾಳೆಯ ಹಣ್ಣಿನಂತೆ’ ನಮ್ಮ ಮಧ್ವಸಿದ್ಧಾಂತದ ಅನೇಕ-ತಾತ್ವಿಕ-ಪ್ರಮೇಯಗಳನ್ನು ತಿಳಿಗನ್ನಡದಲ್ಲಿ ಜನಸಾಮಾನ್ಯರಿಗೆ-ತಿಳಿಯುವಂತೆ ನಿರೂಪಿಸಿದ ಕೀರ್ತಿ ದಾಸಶ್ರೇಷ್ಠರಾದ ಜಗನ್ನಾಥದಾಸರದು. ಇವರು ತಮ್ಮ ಮೌಲಿಕ ಕೃತಿ. "ಶ್ರೀಹರಿಕಥಾಮೃತಸಾರ" ದಲ್ಲಿ ಅನೇಕ-ತಾತ್ವಿಕ-ಪ್ರಮೇಯಗಳನ್ನು ಅಳವಡಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

ಅಹಂ ವೈಶ್ವಾನರೋ ಭೂತ್ವಾ
ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನ ಸಮಾಯುಕ್ತಃ
ಪಚಾಮ್ಯನ್ನಂ ಚತುರ್ವಿಧಂ ॥
(ಶ್ರೀಭಗವದ್ಗೀತಾ-15-14)

ಈ ಶ್ಲೋಕದ ಭಾವವನ್ನು ಕೆಳಗಿನ ಪದ್ಯದಿಂದ ಸಂಗ್ರಹಿಸಿದ್ದಾರೆ—

ವನಜಜಾಂಡ ದೊಳ್ಳುಳಖಿಳ ಚೇ ।
ತನರು ಭುಂಜಿಪ ಚತುರವಿಧ ಭೋ ।
ಜನ ಪದಾರ್ಥದಿ ಚತುರವಿಧರಸರೂಪ ತಾನಾಗಿ ॥
ಮನಕೆ ಬಂದುದನುಂಡುಣಿಸಿ ಸ ।
ಹನವಶುಪಜಯ ಕರಣಕಾನಂ ।
ದನಿಮಿಷರಿಗಾತ್ಮ ಪ್ರದರ್ಶನ ಸುಖವ ನೀವ ಹರಿ ॥

ಬ್ರಹ್ಮಾಂಡದೊಳಗಿನ ಸಕಲ ಪ್ರಾಣಿಗಳು ತಿನ್ನುವ ನಾಲ್ಕುವಿಧದ ಪದಾರ್ಥಗಳಲ್ಲಿ ಶ್ರೀಹರಿಯು ನಾಲ್ಕು ವಿಧದ ರಸರೂಪವಾಗಿದ್ದು, ಅವರವರ ಮನಸ್ಸಿಗೆ ಬಂದುದನ್ನು ತಾನುಂಡು ಅವರಿಗೆ ಉಣಿಸಿ ಶರೀರಕ್ಕೆ-ಪುಷ್ಟಿಯನ್ನು ಇಂದ್ರಿಯಗಳಿಗೆ ಸುಖವನ್ನು ತತ್ವಾಭಿಮಾನಿಗಳಿಗೆ ತನ್ನ ಸ್ವರೂಪದರ್ಶನ ಸುಖವನ್ನು ಕೊಡುವನು.

ಅಣೋರಣೀಯಾನ್ಮಹತೋಮಹೀಯಾ ।
ನಾತ್ಮಾಸ್ಯಜಂತೋರ್ನಿಹಿತೋ ಗುಹಾಯಾಮ್ ॥
(ಕಠೋಪನಿಷತ್ 1-2-20)

ಈ ಮಂತ್ರದ ಅರ್ಥವನ್ನು ಹೀಗೆ ವಿವರಿಸಿದ್ದಾರೆ.

ಅಣುಮಹತ್ತಿನೊಳಿಪ್ಪ ಘನಪರ ।
ಮಣುವಿನೊಳಗಡಗಿಸುವ ಸೂಕ್ಷ್ಮವ ।
ಮುಣುಗಿಸುವ ತೇಲಿಸುವ ಸ್ಥೂಲಗಳ ವನಮಾಯವಿದು ॥

ಅತಿ ಸಣ್ಣದರಲ್ಲಿ, ಅತಿದೊಡ್ಡದರಲ್ಲಿ ಇವನು ಇರುವನು. ಅತಿದೊಡ್ಡದನ್ನು ಅತಿ ಸಣ್ಣದರಲ್ಲಿಡುವನು. ಅತಿ ಹಗುರಿದ್ದುದನ್ನು ನೀರಿನಲ್ಲಿ ಮುಳುಗಿಸುವನು. ಅಸಮಾನ ಭಾರವಿದ್ದುದನ್ನು ತೇಲಿಸುವನು ಎಂದು ಭಾವ.

ಯಸ್ಮಾತ್ಕ್ಷರ ಮತೀತೋಽಹಂ
ಅಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ
ಪ್ರಥಿತಃ ಪುರುಷೋತ್ತಮಃ ॥
(ಶ್ರೀಭಗವದ್ಗೀತಾ 15-17)

ಈ ಶ್ಲೋಕಾರ್ಥವನ್ನು ಕೆಳಗಿನಂತೆ ವರ್ಣಿಸಿದ್ದಾರೆ–

ಪುರುಷರೂಪತ್ರಯ ಪುರಾತನ ।
ಪುರುಷ ಪುರುಷೋತ್ತಮ ಕ್ಷರಾಕ್ಷರ ।
ಪುರುಷ (ಸೂಕ್ತ) ಪೂಜಿತವಾದ ಪೂರ್ಣಾನಂದ ಜ್ಞಾನಮಯ ।

ಶ್ರೀಹರಿಯು ಸೃಷ್ಟಿಕಾಲದಲ್ಲಿ ಮೂರು ಪುರುಷ ರೂಪಗಳನ್ನು ಧರಿಸುತ್ತಾನೆ. ಇವನು ಪುರಾತನನು, ಪುರುಷೋತ್ತಮನು, ಕ್ಷ-ರಾಕ್ಷರರಾದ ರಮಾ ಬ್ರಹ್ಮಾದಿಗಳಿಂದ ಪೂಜಿಗೊಂಬ ಪಾದಗಳುಳ್ಳವನಾಗಿರುತ್ತಾನೆ.

ಪತ್ರಂ ಪುಷ್ಪಂ ಫಲಂ ತೋಯಂ
ಯೋಮೇಭಕ್ತ್ಯಾಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ
ಅಶ್ನಾಮಿಪ್ರಯತಾತ್ಮನಃ
(ಶ್ರೀಭಗವದ್ಗೀತಾ 9-26)

ಇದನ್ನು ಈ ಪದ್ಯದಿಂದ ವಿವರಿಸುತ್ತಾರೆ–

ಕೊಟ್ಟುದನು ಕೈಕೊಂಬ ರಕ್ಷಣ ।
ಬಿಟ್ಟಗಲ ತನ್ನವರ ದುರಿತಗ-
ಳಟ್ಟುವನು ಮೂರದಲಿ ದುರಿತಾರಣ್ಯ ಪಾವಕನು ।

ಪಾಪಾರಣ್ಯಕ್ಕೆ ಬೆಂಕಿಯಂತಿರುವ ಶ್ರೀಹರಿಯು ಭಕ್ತರು ಕೊಟ್ಟದ್ದನ್ನು ಸ್ವೀಕ



**ಶ್ರೀನಿವಾಸ ಮಠದ** ಬಿ. ಎಸ್.ಸಿ;

ರಿಸುವನು. ಅವರನ್ನು ಅರ್ಧಕ್ಷಣ ಕೂಡ ಬಿಟ್ಟಿರಲಾರನು. ಅವರ ಕಷ್ಟಗಳನ್ನು ಪರಿಹರಿಸುವನು.

"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ
ನಾರಾಯಣಃಸ್ಥಿತಃ"
(ಶ್ರೀನಾರಾಯಣೋಪನಿಷತ್)

ಇದರ ಅರ್ಥವನ್ನು ಕೆಳಗಿನ ನುಡಿಯಿಂದ ತಿಳಿಸುತ್ತಾರೆ–

ಶ್ರೀಧರಾದುರ್ಗಾ ಮನೋರಮ |
ವೇದಮುಖ ಸುಮನ ಸಗಣಸಮಾ |
ರಾಧಿತ ಪದಾಂಭೋಜ ಜಗದಂತರ್ಬಹಿ
ರ್ವ್ಯಾಪ್ತ ||

ಶ್ರೀಭೂದುರ್ಗಾ ರೂಪಗಳಿಂದ ಪೂಜೆಗೊಂಬ ಶ್ರೀನಾರಾಯಣನು ಸರ್ವವ್ಯಾಪಿಯಾಗಿದ್ದಾನೆ.

ವಿಹಾಯ ಕಾಮಾನ್ಯಃ ಸರ್ವಾನ್
ಪುಮಾಂಶ್ಚರತಿ ನಿಸ್ಪೃಹಃ |
ನಿರ್ಮಮೋ ನಿರಹಂಕಾರಃ
ಸಶ್ಶಾಂತಿ ಮಧಿಗಚ್ಛತಿ ||
(ಶ್ರೀಭಗವದ್ಗೀತಾ 2-71)

ಇದನ್ನು,

ಹಗಲು ನಂದಾದೀಪದಂದದಿ |
ನಿಗಮವೇದ್ಯನ ಪೂಜಿಸುತ ಕೈ |
ಮುಗಿದು ನಾಲ್ಕರೊಳೊಂದು ಪುರುಷಾ
ರ್ಥವನು ಬೇಡದಲೆ |

ಜಗದುದರಕೊಟ್ಟಿದನು ಭುಂಜಿಸಿ |
ಮಗ, ಮಡದಿ, ಪ್ರಾಣೇಂದ್ರಿಯಾತ್ಮಾ |
ದಿಗಳು ಭಗವದ ಧೀನವೆಂದಡಿಗಡಗೆ
ನೆನೆಯುತಿರು ||

ಹಗಲಿನಲ್ಲಿ (ಕೇವಲ ದೇವರ ಪ್ರೀತಿಗಾಗಿ ಇಟ್ಟ) ನಂದಾದೀಪದಂತೆ ವೇದ ಪ್ರತಿಪಾದ್ಯನಾದ ಶ್ರೀ ಹರಿಯನ್ನು ಪೂಜಿಸಿ, ನಮಸ್ಕರಿಸಿ ಚತುರ್ವಿಧ ಪುರುಷಾರ್ಥಗಳನ್ನು ಬೇಡದೆ, ಜಗದುದರನು ಕೊಟ್ಟದ್ದನ್ನು ಭುಂಜಿಸಿ ಮಕ್ಕಳು, ಮಡದಿ ಇಂದ್ರಿಯಗಳು, ಜೀವ ಮತ್ತು ಶರೀರ ಎಲ್ಲವೂ ಭಗವದಧೀನವೆಂದು ಹೆಜ್ಜೆ ಹೆಜ್ಜೆಗೆ ನೆನೆದಲ್ಲಿ ಮೋಕ್ಷವು ತಾನಾಗಿಯೇ ಲಭಿಸುವದು—

ನೇಹಾಭಿಕ್ರಮನಾಶೋಽಸ್ತಿ
ಪ್ರತ್ಯವಾಯೋ ನ ವಿದ್ಯತೇ |
ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇಮಹತೋ ಭಯಾತ್ ||
(ಶ್ರೀಭಗವದ್ಗೀತಾ-2-40)

ಇದರ ಅರ್ಥವನ್ನು ಕೆಳಗಿನ ಪದ್ಯದಲ್ಲಿ ಸಂಗ್ರಹಿಸಿದ್ದಾರೆ–

ಲೋಪವಾದರು ಸರಿಯೆ ಕರ್ಮಜ |
ಪಾಪಪುಣ್ಯಗಳೆರಡು ನಿನ್ನನು |
ಲೇಪಿಸವು ನಿಷ್ಕಾಮುಕನು ನೀನಾಗಿ
ಮಾಡುತಿರೆ |
ಸೌಪರ್ಣಿವರ ವಹನ ನಿನ್ನ ಮ |
ಹಾಪರಾಧಗಳೆಣಿಸದಲೆ ಸ್ವ |

ರ್ಗಾಪವರ್ಗದೊಳಿಟ್ಟು ಸಲಹುವ ನಿತ್ಯ
ಸುಖಸಾಂದ್ರ ||

ನಿಷ್ಕಾಮಿಯಾಗಿ ಸಕಲ ಕರ್ಮಗಳನ್ನು ಮಾಡುತ್ತಿದ್ದರೆ, ಅವುಗಳಲ್ಲಿ ತುಸು ಲೋಪವಾದರೂ ಸರಿ ಕರ್ಮಜನ್ಯಪಾಪಗಳು ತಗಲುವದಿಲ್ಲ, ನಿತ್ಯಾನಂಡನಾದ ಗರುಡವಾಹನನು ಮಹಾಪರಾಧಗಳನ್ನು ಲಕ್ಷಿಸದೇ ಇಹ ಪರಗಳಲ್ಲಿ ಸಲಹುವನು.

ಧರ್ಮೋಭವತ್ಯಧರ್ಮೋಽಪಿ
ಕೃತೋಽಭಕ್ತೈಸ್ತವಾಚ್ಯುತ |
ಪಾಪಂಭವತಿ ಧರ್ಮೋಽಪಿ
ಯೇನ ಭಕ್ತೈಃ ಕೃತೋಹರೇ ||
(ಶ್ರೀಮ. ಭಾ. ತಾ. ನಿರ್ಣಯ)

ಇದರ ಭಾವವನ್ನು ಹೀಗೆ ಸೂಚಿಸಿದ್ದಾರೆ–

ದೀಪದಿವದಲಿ ಕಂಡರಾದರೆ |
ಲೋಪಗೈಸುವರಾಕ್ಷಣ ಹರಿ ಸ |
ಮೀಪದಲ್ಲಿರೆ ನಂದನಾಮಸುನಂದವೆನಿ
ಸುವವು |
ಔಪಚಾರಿಕವಲ್ಲ ಸುಜನರ |
ಪಾಪಕರ್ಮವು ಪುಣ್ಯವೆನಿಸುವವು |
ಪಾಪಿಗಳ ಸತ್ಪುಣ್ಯಕರ್ಮವು ಪಾಪ
ವೆನಿಸುವವು ||

ಹಗಲಿನಲ್ಲಿ ದೀಪವನ್ನು ಕಂಡ ಕೂಡಲೇ ಆದನ್ನು ಆರಿಸಿಬಿಡುವರು. ಅದೇ ದೀಪವು ಶ್ರೀಹರಿಯ ಸನಿಹದಲ್ಲಿದ್ದರೆ ನಂದಾ ದೀಪವೆಂದು ಬೆಳಗುವರು. ಇದು ಔಪಚಾರಿಕ ಸುಜನರು ಮಾಡಿದ ಪಾಪ ಕರ್ಮಗಳು ಪುಣ್ಯವೆನಿಸುತ್ತವೆ. ಪಾಪಿಗಳು ಮಾಡಿದ ಪುಣ್ಯಕರ್ಮಗಳಿಗೆ ಪಾಪ ಫಲಗಳೇ ದೊರೆಯುತ್ತವೆ.

ಹೀಗೆ ಇನ್ನೂ ವೇದೋಪನಿಷತ್ತು ಶಾಸ್ತ್ರಗಳ ಸಾರವನ್ನೊಳಗೊಂಡ 'ಶ್ರೀ ಹರಿ ಕಥಾಮೃತ ಸಾರ' ವನ್ನು ಸರ್ವರೂ ಸೇವಿಸಿ ಶ್ರೀ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಬೇಕು.



# ತಿರುಪತಿಯಲ್ಲಿ ಪುರಂದರದಾಸರು

ಡಾ ॥ ಕೆ. ಸರ್ವೋತ್ತಮನ್

ಪ್ರಾಚೀನ ಕಾಲದಲ್ಲಿ ದೇಶಾಟನೆ ಮಾಡುವುದನ್ನು ವ್ಯಕ್ತಿಗೌರವಕ್ಕೆ ಚಿಹ್ನೆಯಾಗಿ ಭಾವಿಸುತ್ತಿದ್ದರು. ದೇಶಾಟನೆ ಮಾಡುವವರನ್ನು ನಾಲ್ಕು ಬಗೆಯಾಗಿ ವರ್ಗೀಕರಿಸಬಹುದು. ವಿದ್ಯಾರ್ಜನೆಯ ನಿಮಿತ್ತವಾಗಿ ಕಾಶಿ, ತಕ್ಷಶಿಲೆ, ನವದ್ವೀಪಗಳಿಗೆ ಹೋಗುವ ವಿದ್ಯಾರ್ಥಿಗಳು ಪ್ರಥಮ ಶ್ರೇಣಿಯಲ್ಲಿ ಸೇರುತ್ತಾರೆ. ಜ್ಞಾನಸಂಪನ್ನರಾದ ಮೇಲೆ ವಿದ್ವತ್ಸಭೆಗಳಲ್ಲಿ, ಮಹಾರಾಜರ ಆಸ್ಥಾನಗಳಲ್ಲಿ ತಮ್ಮ ಹಿರಿಮೆಯನ್ನು ಸ್ಥಾಪಿಸುವುದಕ್ಕಾಗಿ ಸಂಚಾರ ಮಾಡುವರು ದ್ವಿತೀಯ ಶ್ರೇಣಿಗೆ ಸೇರುತ್ತಾರೆ. ಧನಾರ್ಥವಾಗಿ ತಿರುಗುವ ವ್ಯಾಪಾರಿಗಳು ತೃತೀಯವರ್ಗಕ್ಕೆ ಸೇರುತ್ತಾರೆ. ಈ ಬಗೆಯಲ್ಲದೆ ಲೌಕಿಕ ವಾಂಛೆಗಳನ್ನು ಬಿಟ್ಟು ಸಾಮಾನ್ಯರ ಪ್ರಗತಿಗಾಗಿ ನೀತಿ ಭಕ್ತಿ ವೈರಾಗ್ಯವನ್ನು ಬೋಧಿಸುವವರು ಕೊನೆಯ ಸಮೂಹಕ್ಕೆ ಸೇರುತ್ತಾರೆ. ಈ ವರ್ಗಕ್ಕೆ ಸೇರಿದವರು ಪುರಂದರ ದಾಸರು.

ಪುರಂದರದಾಸರ ಹುಟ್ಟು ಹೆಸರು ಶ್ರೀನಿವಾಸ ನಾಯಕ. ಕಾರಣಾಂತರದಿಂದ ವೈರಾಗ್ಯ ಹೊಂದಿದ ನಾಯಕರು ವಿಜಯನಗರಕ್ಕೆ ಬಂದರು. ಅಲ್ಲಿ ವ್ಯಾಸರಾಯರು ಪುರಂದರರ ಅಸಾಧಾರಣ ವ್ಯಕ್ತಿತ್ವವನ್ನು ಗುರುತಿಸಿ ದೀಕ್ಷೆ ಕೊಟ್ಟರು. ಪುರಂದರದಾಸರು ನಾಲ್ಕುಲಕ್ಷದ ಎಪ್ಪತ್ತೈದುಸಾವಿರ ಪದಗಳನ್ನು ಹಾಡಿದರು. ಹರಿದಾಸದೀಕ್ಷೆಯನ್ನು ಪಡೆದನಂತರ ದಾಸರು ದೇಶಾಟನೆಯನ್ನು ಮಾಡಿ ಜನರಲ್ಲಿ ವಿಶಾಲವಾದ ಭಾಗವತ ಮನೋಧರ್ಮವನ್ನು ಪ್ರಚಾರ ಮಾಡಿದರು. ಈವರೆಗೆ ದೊರೆತು ಪ್ರಕಟವಾಗಿರುವ ಕೀರ್ತನೆಗಳಿಂದ ದಾಸರು ತಿರುಪತಿ, ಶ್ರೀರಂಗ, ಕಳಸ, ಬೇಲೂರು, ನಂಜನಗೂಡು, ಶ್ರೀರಂಗಪಟ್ಟಣ, ಉಡುಪಿ, ಪಂಡರಪುರ ಕ್ಷೇತ್ರಗಳನ್ನು ದರ್ಶಿಸಿ, ಅಲ್ಲಿನ ದೇವರಗಳನ್ನು ಸೇವಿಸಿದರೆಂದು ಸ್ಪಷ್ಟವಾಗುವುದು. ತಿರುಪತಿ, ಶ್ರೀರಂಗಪಟ್ಟಣ, ಪಂಡರಪುರಗಳ ಬಗ್ಗೆ ಪದಗಳು ಹೆಚ್ಚಾಗಿ ಕಣ್ಣಿಗೆ ಬೀಳುತ್ತವೆ. ರಾಮಾನುಜ ಮತಾನುಯಾಯಿಗಳಾದ ಶ್ರೀವೈಷ್ಣವರಿಗೆ ಶ್ರೀರಂಗ, ಶ್ರೀರಂಗಪಟ್ಟಣ ಕೇಂದ್ರಸ್ಥಾನವಾಗಿರುವುದು, ದ್ವೈತಿಗಳಿಗೆ ಪಂಡರಪುರ ಆರಾಧ್ಯ ಕ್ಷೇತ್ರವಾದಂತೆ, ಪುರಂದರದಾಸರ ಕಾಲದಲ್ಲಿ ವಿಜಯನಗರಕ್ಕೂ ತಿರುಪತಿಗೂ ಸಂಬಂಧ ಬಲವಾಯಿತು.

ಶ್ರೀಪಾದರಾಯರು ಸಾಳುವ ನರಸಿಂಗರಾಯನ ಸಮಕಾಲೀನರು. ಅವರು ನರಸಿಂಗರಾಯನ ಬ್ರಹ್ಮಹತ್ಯಾದೋಷವನ್ನು ತಮ್ಮ ತಪಶ್ಶಕ್ತಿಯಿಂದ ಪರಿಹಾರಮಾಡಿದರು. ಆದ್ದರಿಂದ ನರಸಿಂಗರಾಯನು ವಿಜಯನಗರ ಚಕ್ರವರ್ತಿಯಾದ ಮೇಲೆ ಶ್ರೀಪಾದರಾಯರಿಗೆ ವಿಶೇಷಗೌರವ ನೀಡಿದನು. ಅವರ ಆಜ್ಞೆಯಿಂದ ವ್ಯಾಸರಾಯರನ್ನು ರಾಜಗುರುವಾಗಿ ಸ್ವೀಕಾರಮಾಡಿಕೊಂಡನು. ವ್ಯಾಸರಾಯರು ತಿರುಮಲೆಯಲ್ಲಿ ಇದ್ದು 12 ವರ್ಷಕಾಲ ಸ್ವಾಮಿ ಕೈಂಕರ್ಯಗಳನ್ನು ಸುಧಾರಿಸಿದರು. ಆದ್ದರಿಂದ ವ್ಯಾಸರಾಯರ ಶಿಷ್ಯರಾದ ಪುರಂದರದಾಸರು ಎಷ್ಟೋ ಸಲ ತಿರುಪತಿಗೆ ಬಂದಿರಬಹುದು. ಇದಕ್ಕಿಂತಲೂ ಬಲವಾದ ಮತ್ತೊಂದು ಆಧಾರವೆಂದರೆ; ಆಂಧ್ರಸಾಹಿತ್ಯದಲ್ಲಿ ಪದಕವಿತಾ ಪಿತಾಮಹನಾದ ಅನ್ನಮಯ್ಯ ಪುರಂದರದಾಸರ ಸಮಕಾಲೀನನೆಂದು ತಾಳ್ಲಪಾಕ ಚಿನ್ನನ್ನ ಗ್ರಂಥಸ್ಥಮಾಡಿರುವಿಕೆ. ಅನ್ನಮಯ್ಯನನ್ನು ಮಹಾವಿಷ್ಣುವಿನ ಅವತಾರವಾಗಿ ದಾಸರು ಕೀರ್ತಿಸಿದರಂತೆ. ಅನ್ನಮಯ್ಯ ಪುರಂದರದಾಸರನ್ನು ಸಾಕ್ಷಾತ್ ಪಾಂಡುರಂಗವಿಠಲನಾಗಿ ಗೌರವಿಸಿದರಂತೆ.

ಪುರಂದರದಾಸರ ಸಂಕೀರ್ತನೆಗಳಲ್ಲಿ ವೆಂಕಟರಮಣನ ಹಾಡುಗಳು ವಿಸ್ತೃತವಾಗಿವೆ. ಆ ಕೃತಿಗಳನ್ನು ನಾಲ್ಕುಬಗೆಯಾಗಿ ವಿಭಾಗಿಸಬಹುದು— ತಿರುಪತಿಯಲ್ಲಿ ಹಾಡಿದ ಹಾಡುಗಳು; ವಿಜಯನಗರಕ್ಕೆ ಹೋದ ಮೇಲೆ ಹಾಡಿದ ಪದಗಳು; ಶಿಶುಗೀತೆ ಮಂಗಳಗೀತೆಗಳಲ್ಲಿ ವೆಂಕಟರಮಣನನ್ನು ಕುರಿತು ಅಪ್ರಯತ್ನವಾಗಿ ಹಾಡಿದ ಕೀರ್ತನೆಗಳು, ಸನ್ನಿವೇಶವನ್ನು ಸ್ಪಷ್ಟವಾಗಿ ಊಹಿಸಲು ಸಾಧ್ಯವಿಲ್ಲದ ಕೃತಿಗಳು.

ಪುರಂದರದಾಸರು ವಿಠಲಭಕ್ತರು. ಆದರೆ ಅವರಿಗೆ ಎಲ್ಲಾ ದೈವಗಳೂ ಸಮಾನವೇ. ಇತರ ದೇವತಾಮೂರ್ತಿಗಳಲ್ಲಿ ಕೂಡ ತನ್ನ ಸ್ವಾಮಿಯನ್ನು ನೋಡಿದ ಧನ್ಯರು. ಆದ್ದರಿಂದ ವೆಂಕಟರಮಣನ ವಿಗ್ರಹದಲ್ಲಿ ವಿಠಲನ ರೂಪವನ್ನು ದಾಸರು ನೋಡಿದ್ದಾರೆ.

> "ಶರಣು ನಿನಗೆ ಶರಣೆಂಬನು ವಿಠಲ........
> ಕಂಡೆ ನಾ ನಿನ್ನ ವೆಂಕಟನೆಂಬ ವಿಠಲ"

ಇದೇ ರೀತಿಯಲ್ಲಿ ಅನ್ನಮಯ್ಯ ವಿಠಲನ ವಿಗ್ರಹದಲ್ಲಿ ವೆಂಕಟರಮಣನನ್ನು ನೋಡುತ್ತಾನೆ.

> ಅದಿಗೊ ವಿಜಯನಗರಮಂದು ವಾಡವಾಡಲ
> ವೆದಚಲ್ಲಿ ವರಮುಲ ವಿಠಲುಡು
> ಉದಟು ಶ್ರೀವೆಂಕಟಾದ್ರಿನುಂಡಿ ವಚ್ಚಿ ಗುಡಿಲೋನ
> ಸದನ ರುಕ್ಮಿಣಿ ತಾನು ನದೆ ವಿಠಲುಡು

ವೆಂಕಟಾದ್ರಿಯಿಂದ ಬಂದು ವಿಜಯನಗರದಲ್ಲಿ ವಿಠಲನಾಗಿ ನಿಂತನಂತೆ. ಪುರಂದರದಾಸರ ದೃಷ್ಟಿಯಲ್ಲಿ ರಂಗನಾಥಸ್ವಾಮಿ, ಪೂರಿಜಗನ್ನಾಥ, ಉಡುಪಿ ಕೃಷ್ಣರು ಸಮಾನರೇ. ಈ ಕೀರ್ತನೆ ನೋಡಿ—

> "ಕೂಸು ಕಂಡೆವಮ್ಮ ಅಮ್ಮ ನಿಮ್ಮ
> ಕೂಸು ಕಂಡೆವಮ್ಮ
> ಕಾಸಿಗೆ ವೀಸದ ಬಡ್ಡಿ ಗಳಿಸಿಕೊಂಡು
> ಶೇಷಗಿರಿಯ ಮೇಲೆ ವಾಸವಾಗಿದ್ದಾನೆ
> ವಂಚಿಸಿ ಬಲಿಯೋಳ್ ಪ್ರಪಂಚವೆಲ್ಲ ಸೆಳೆದು
> ಕಂಚಿ ಪಟ್ಟಣದಿ ಬಲ್ ಮಿಂಚಾಗಿದ್ದಾನೆ



ಚಿತ್ರ : ಶ್ರೀ ಚಂದ್ರಪ್ರಕಾಶ್. ಪಿ.

ಗುಡ್ಡ ಬೆರಳೊಳೆತ್ತಿ ದೊಡ್ಡಿಗೋವ್ಗಳ ಕಾಯ್ದ
ಬದ್ದಿ ಜಗನ್ನಾಥ ಗಿಡ್ಡದಬ್ಬನೆ
ದುಡುಕು ಮಾಡಿ ಹಾಲು ಮಡಕೆಗಳ ಒಡೆದು
ಹಡಗನೇರಿ ಬಂದು ಉಡುಪಿಲಿ ಇದ್ದಾನೆ
ಮಂಗಳ ರೂಪ ಪಾದಂಗಳುಳ್ಳ ನಿಮ್ಮ
ರಂಗ ಪುರಂದರ ವಿಠಲ ಶ್ರೀ ಕೃಷ್ಣನೆ”

ತಿರುಮಲೆಯಲ್ಲಿ ಸ್ವಾಮಿಯನ್ನು ಸೇವಿಸಿ ಹಾಡಿದ ಮುಖ್ಯ ಹಾಡುಗಳು—ಖರಹರ ಪ್ರಿಯ ರಾಗದ “ಇಂದು ನಿನ್ನ ಮರೆಯ ಹೊಕ್ಕೆ ವೆಂಕಟೇಶನೆ”, ಆರಭಿರಾಗದ “ವೆಂಕಟೇಶ ಬೇಡಿಕೊಂಬೆ” ಸೌರಾಷ್ಟ್ರದ “ಸಕಲದುರಿತಗಳ” ಹಿಂದೂಸ್ಥಾನಿಯಲ್ಲಿ ಹಾಡಿದ “ವಂಕಟಾಚಲನಿಲಯಂ”. ಈ ಕೀರ್ತನೆಗಳಲ್ಲಿ ಶರಣು ಹೊಂದಿದ ಭಕ್ತರ ಆತ್ಮನಿವೇದನೆ ವ್ಯಕ್ತವಾಗುತ್ತದೆ. ಇಲ್ಲಿ ಮುಕ್ತಿಗಾಗಿ ದಾಸರು ಸ್ವಾಮಿಯನ್ನು ಬೇಡುತ್ತಾರೆ.

“ಶರಣಪಾಲ ಬಿರುದು ತೋರಿ ಪೊರೆವ ದೇವನೆ
ಕರುಣಿನೆನೆಗೆ ಮುಕುತಿಯ ಪುರಂಡರವಿಠಲನೆ”

“ವೆಂಕಟೇಶ ಬೇಡಿಕೊಂಬೆ ಕೃಪೆಯ
ಪಾಲಿಸೋ........
ಬ್ರಹ್ಮ ಶಂಕರಾದಿವಂದ್ಯ ಎನಗೆ ಮುಕ್ತಿ
ತೋರಿಸೊ”

ಸಕಲ ದುರಿತಗಳ ಪರಿಹಾರ ಮಾಡಿದ್ಯೋ ವೆಂಕಟೇಶ” ಎನ್ನುವ ಕೀರ್ತನೆಯಲ್ಲಿ ಮತ್ಸ್ಯಾದಿ ಅವತಾರಗಳನ್ನು ವರ್ಣಿಸುತ್ತಾರೆ. ‘ಹರಿದಾಸರ ಮೇಲೆ ಒಲಿದು ಬೇಗದಿ ಬಂದೋ ವೆಂಕಟೇಶ’ ಎನ್ನುವ ಪಾದದಲ್ಲಿ ವೆಂಕಟರಮಣನ ಅಪಾರ ಕೃಪಾಕಟಾಕ್ಷವನ್ನು ಸ್ಪಷ್ಟಪಡಿಸುತ್ತಾರೆ.

ಪುರಂದರದಾಸರು ಸ್ವಾಮಿದರ್ಶನ ಮಾಡಿಕೊಂಡು ವಿಜಯನಗರಕ್ಕೆ ಹೋದರು. ಈ ಲೋಕದಲ್ಲಿ ಸಾಧಾರಣವಾಗಿ ನಮಗೆ ತಿಳಿದವರು ಯಾತ್ರೆ ಹೋಗಿ ಬಂದರೆ ಅವರ ಸುತ್ತೂ ನೇರಿ ವಿಶೇಷಗಳನ್ನು ಕೇಳುತ್ತೇವೆ. ಅದೇ ವಿಧವಾಗಿ ಪುರಂದರದಾಸರ ಕಡೆ ಎಲ್ಲ ಜನರು ಸೇರುತ್ತಾರೆ. ದಾಸರು ತಾವು ಮಾಡಿದ ಯಾತ್ರೆಯನ್ನು, ನೋಡಿದ ದೃಶ್ಯಗಳನ್ನು ಕ್ರಮವಾಗಿ ಹೇಳುತ್ತಾರೆ. ಆದರೆ ಕೇಳುವರಲ್ಲಿ ಕೆಲವರಿಗೆ ಸಂದೇಹ ಬರುತ್ತದೆ. ಕೆಲವರು ನಂಬುವದಿಲ್ಲ. ಆ ಸ್ಥಿತಿಯಲ್ಲಿ ದಾಸರು.

ಬೂಟಕದ ಮಾತಲ್ಲ ಕೇಳಿರೋ
ಭೂರಿ ದೈವರ ಗಂಡನಂಘ್ರಿಯ
ಕಂಡೆ ಕಂಡೆ ಸ್ವಾಮಿಯ ಬೇಡಿ ಕೊಂಡೆ

ಎಂದು ಸ್ವಾಮಿ ದಿವ್ಯಮಂಗಳಾಕಾರವನ್ನು ಚಿತ್ರಿಸುತ್ತಾರೆ- ‘ತಿರುಪತಿ ವೆಂಕಟರಮಣ’ ಎನ್ನುವ ಕೀರ್ತನೆಯಲ್ಲಿಕೂಡ ಯಾತ್ರಾಕ್ರಮವನ್ನು ತನ್ನ ಅನುಭವಗಳನ್ನು ಹೇಳುತ್ತಾರೆ. ಅದರಲ್ಲಿ ‘ದಾಸರ ಕೂಡೆ ಗೋವಿಂದ ಅಲ್ಲಿ ದಾರಿ ನಡೆವುದೆ ಚಂದ ... ... ಅಲ್ಲಲ್ಲಿ ಜನಗಳ ಕೂಟ ಮತ್ತಲ್ಲಲ್ಲಿ ಬ್ರಾಹ್ಮಣ ರೂಟ – ಅಲ್ಲಲ್ಲಿ ಪಿಡಿದ ಕೋಲಾಟ. ಮತ್ತಲ್ಲಿಂದ ಊರಿಗೆ ಓಟ’ ಚರಣಗಳು ಇಂದಿಗೂ ಕನ್ನಡಿಗರ ಯಾತ್ರಾಕ್ರಮವನ್ನು ಹೋಲುತ್ತವೆ.

ಅನ್ನಮಯ್ಯ ತಿರುಪತಿ ಪರಿಸರವನ್ನು
“ಬುಗುಲುಕೊನು ಪರಿಮಳಂಬುಲ ಪೂವು
ದೋಟಲುನು
ಪೊಂದೈನ ನಾನಾವಿಧಂಬುಲ ವನಂಬುಲುನು
ನಿಂಡಿ ಕ್ರಿಕ್ಕಿರಿಸಿ ಪಂಡಿನ ಮಹಾವೃಕ್ಷಮುಲ
ನೀಡಲನು ನಿಲಿಚಿ ನಿಲಿಚಿ
ಎಂದು ಹೇಳಿದರೆ ದಾಸರು;

ಅಲ್ಲಿದೆ ಪರಿಷೆಯ ಗುಂಪು ಮ
ತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮ
ತ್ತಲ್ಲಲ್ಲಿ ಪರಿಮಳ ದಿಂಪು

ಎಂದು ರಮಣೀಯ ವಾತಾವರಣವನ್ನು ನಮ್ಮ ಕಣ್‌ಮುಂದೆ ನಿಲ್ಲಿಸುತ್ತಾರೆ.

ತಿರುಮಲೆಯಲ್ಲಿ ಇರುವ ತೀರ್ಥಗಳಲ್ಲಿ ‘ಪಾಪವಿನಾಶಿನಿ’ ಒಂದು. ಇದರಲ್ಲಿ ಸ್ನಾನ ಮಾಡಿದರೆ ಜನ್ಮಾಂತರ ಪಾಪಗಳು ಪರಿಹಾರವಾಗುತ್ತವೆಂದು ಭಕ್ತರ ನಂಬಿಕೆ. ‘ಪಾಪವಿನಾಶಮುಲೋನ’ ಭರಿತಮುಗು ದುರಿತಮುಲು ಪಗಿಲಿ ಪೋವುಚು ನುಂಡ’ ಎಂದು ಅನ್ನಮಯ್ಯ ಹೇಳಿದರೆ ದಾಸರು ‘ಪಾಪವಿನಾಶಿನಿ ಸ್ನಾನ, ಭವಪಾದೋದಕವೇ ಪಾನ’ ಎಂದು ಅದರ ಮಹಿಮೆಯನ್ನು ಪ್ರಕಟಿಸುವರು.

ತಿರುಪತಿಯಿಂದ ತಿರುಮಲೆಗೆ ನಡೆದು ಹೋಗುವ ದಾರಿಯಲ್ಲಿ ನರಸಿಂಹಸ್ವಾಮಿ ದೇವಸ್ಥಾನ ಕಂಡು ಬರುತ್ತದೆ. ಈಗಲೂ ನೋಡಬಹುದು. ದಾಸರು ಈ ನರಸಿಂಹಸ್ವಾಮಿಯನ್ನು ಹೀಗೆ ಕೀರ್ತನೆ ಮಾಡಿದ್ದಾರೆ.

“ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ
ಸುರರು ಅಂಬರದಿ ಪೂಮಳೆಯ ಕರೆಯೆ

(28 ನೇ ಪುಟ ನೋಡಿ)

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ಶೀರ್ವಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ :- ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು.
ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.
ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

# ಮಾಧವ ಸ್ಮೃತಿ

**ಶ್ರೀ ಟಿ. ಎಸ್. ಪದ್ಮನಾಭರಾವ್**

ಶ್ರೀಮದ್ಭಾಗವತವನ್ನು ಬಿಟ್ಟರೆ, ಕೃಷ್ಣ ಭಕ್ತಿ ಕಾವ್ಯಗಳಲ್ಲಿ ನಮ್ಮ ಗಮನ ಸೆಳೆಯುವ ಹಾಡುಗಬ್ಬಗಳೆಂದರೆ ಜಯದೇವ ಕವಿಯ 'ಗೀತಗೋವಿಂದ' ಹಾಗೂ ಲೀಲಾಶುಕನ 'ಶ್ರೀಕೃಷ್ಣ ಕರ್ಣಾಮೃತ' ಗಳೆನ್ನಬಹುದು. ಕೃಷ್ಣ ಕತೆಯಲ್ಲಿ ತುಂಬಿದ ಮಾನವೀಯತೆ, ಮಾಧುರ್ಯ, ಲಲಿತ ಶೃಂಗಾರ ಇವುಗಳನ್ನು ರಸಿಕರ ಮನಸ್ಸಿಗೆ ಉಣಬಡಿಸುವ ಈ ಕಾವ್ಯಗಳು ನವ್ಯೋನವನವೆನಿಸಿವೆ. ಬಾಲಕೃಷ್ಣನ ತುಂಟಾಟ, ಗೋಪಿಯರೊಡನೆ ಅವನ ಸರಸ, ಇವು ಶ್ರೀಕೃಷ್ಣಕರ್ಣಾಮೃತದ ವಸ್ತುವಾದರೆ, ಗೀತಗೋವಿಂದ ಪ್ರೌಢವಯಸ್ಸಿನ ಕೃಷ್ಣನ ಕೇಳೀವಿಲಾಸಗಳನ್ನು ಬಣ್ಣಿಸುತ್ತದೆ. ಇವೆರಡೂ ಆಧ್ಯಾತ್ಮಿಕವಾದ ಧ್ವನ್ಯರ್ಥವನ್ನೊಳಗೊಂಡು ಜೀವಾತ್ಮ – ಪರಮಾತ್ಮರ ಸಂಬಂಧದ ವಿವಿಧ ಹಂತಗಳನ್ನು ತೋರಿಸುತ್ತವೆ ಎಂದು ಕೃಷ್ಣಪಂಥ ಎಂದರೆ ಚೈತನ್ಯಪಂಥದ ಜ್ಞಾನಿಗಳು ತಿಳಿಸಿದ್ದಾರೆ.

ಹನ್ನೆರಡು ಸರ್ಗಗಳ, ಮೃದು ಮಧುರ ಸಂಗೀತದ ಗಂಧರ್ವಕಲ್ಪನಾವಿಲಾಸದಿಂದ ಕೂಡಿದ 'ಗೀತಗೋವಿಂದ' ಸಂಗೀತಜ್ಞರಿಗೆ ಜೇನಿನ ಕೊಡದಂತೆ, ರಾಗವೈವಿಧ್ಯ, ಸನ್ನಿವೇಶಕ್ಕೆ ತಕ್ಕಂತ ಪದಜೋಡಣೆ, ಪದಚಿತ್ರಣ ಇವು ಜಯದೇವನ ಬನಿಗೆ ಎಂಥವರೂ ತಲೆದೂಗುವಂತೆ ಮಾಡೀತು. ಬಂಗಾಳದ ದೊರೆ ಲಕ್ಷ್ಮಣ ಸೇನನ ಆಸ್ಥಾನದಲ್ಲಿ ಜಯದೇವನಿದ್ದನೆಂಬುದು ಸುಪರಿಚಿತವಾದ ಕತೆ. ಎಂದರೆ ಕ್ರಿ. ಶ. ೧೧೫೦ ರ ಸುಮಾರಿಗೆ ಈತನಿದ್ದ ಎಂದಾಗುತ್ತದೆ. ಈತನ ಪತ್ನಿ ಪದ್ಮಾವತೀ. ತಂದೆ ಭೋಜದೇವ ತಾಯಿ ರಾಧಾದೇವಿ(ರಮಾದೇವಿ?) ಎಂದೂ ಆತನೇ ಹೇಳಿಕೊಂಡಿದ್ದಾನೆ. ಬಂಗಾಳದ ಕಿಂದುಬಿಲ್ವ ಎಂಬ ಹಳ್ಳಿ ಇವನ ಹುಟ್ಟೂರು. ಇವನ ಕೆಲವು ಗೆಳೆಯರು ಉತ್ತಮ ಕವಿಗಳಾಗಿದ್ದರು. ಇವರ ಹೆಸರುಗಳೂ ಇಲ್ಲಿ ಉಲ್ಲೇಖಿತವಾಗಿವೆ. ಈ ಮಧುರ ಕಾವ್ಯಕ್ಕೆ ಹಲವರು ಟೀಕೆಗಳನ್ನು ಬರೆದಿದ್ದಾರೆ. ಶಂಕರ ಮಿಶ್ರ, ಕುಂಭಕರ್ಣ ಇವರು ಟೀಕಾಕಾರರಲ್ಲಿ ಮುಖ್ಯರಾಗಿದ್ದಾರೆ. ಗೀತಗೋವಿಂದದ ಜನಪ್ರಿಯತೆಯ ಬಗ್ಗೆ ಹೆಚ್ಚು ಬರೆಯುವ ಆವಶ್ಯಕತೆಯಿಲ್ಲ. ಜಯದೇವನ ಅಷ್ಟಪದಿಗಳು ಎಲ್ಲವರ್ಗದ ಜನರನ್ನೂ ಆಲಿಸುವ ಹಾಗೆ ಮಾಡುವ ಚುಂಬಕ ಶಕ್ತಿ ಹೊಂದಿವೆ.

ರಾಧಾ-ಮಾಧವರ ಪ್ರೇಮದ ಕಲ್ಪನಾ-ವಿಲಾಸ ಮಾತ್ರವೇ ಈ ಮಹಾಕಾವ್ಯದ ವಸ್ತುವಲ್ಲ. ಇಲ್ಲಿ ಶ್ರೀಕೃಷ್ಣನ ದೈವೀಕ ಶಕ್ತಿ, ಮಹಾವಿಷ್ಣುವಿನ ಮಾನವರೂಪವಾದ ಅವನ ಮಹಾತ್ಮೆ, ಇವೂ ಇಲ್ಲಿವೆ. ಅಡಿಗಡಿಗೆ ಕೃಷ್ಣನ ಭೂಮ ವ್ಯಕ್ತಿತ್ತ್ವವನ್ನು ಕವಿ ನಮಗೆ ಜ್ಞಾಪಿಸುತ್ತಾನೆ. ಟೀಕಾಕಾರರು ಒಂದೊಂದು ಸರ್ಗದ ನಾಯಕನಾದ ಕೃಷ್ಣನಿಗೂ ಪೋಷಕವಾದ ಬೇರೆ ಬೇರೆ ಹೆಸರುಗಳನ್ನಿತ್ತಿದ್ದಾರೆ. ಇವು ತುಂಬ ಅರ್ಥಪೂರ್ಣವಾಗಿವೆ.

ಮೊದಲ ಸರ್ಗ "ಸಾಮೋದ ದಾಮೋದರ"ನ ಸುಂದರ ವಿಲಾಸದ ವರ್ಣನೆಯನ್ನೊಳಗೊಂಡಿದೆ. ಮೊದಲ ಶ್ಲೋಕವೇ ನಮಗೆ ನಗೆ ತರಿಸುತ್ತದೆ; ಕೃಷ್ಣನ ತುಂಟತನದ ಬಗ್ಗೆ ಅಭಿಮಾನ ಮೂಡಿಸುತ್ತದೆ. ಪುಟ್ಟನಾಗು ಕೃಷ್ಣನನ್ನ ಮನೆಗೆ ಹೇಗೆ ವಾಪಸು ಕಳಿಸಬೇಕೆಂದು ತಂದೆಯ ಯೋಚನೆ

ಸಂತೆಯಿಂದ ಮನೆಗೆ ಮರಳುತ್ತಿರುವ ರಾಧೆಯನ್ನು ನೋಡಿ ನಂದರಾಜ ಹೇಳುತ್ತಾನೆ: (ಇದನ್ನು ಜಯದೇವನ ಮಾತುಗಳಲ್ಲೇ ಕೇಳಿ)—

ಮೇಘೈರ್ಮೇದುರ ಮಂಬರಂ ವನಭುವಃ
ಶ್ಯಾಮಾಸ್ತಮಾಲದ್ರುಮೈಃ
ನಕ್ತಂ ಭೀರುರಯಂ ತ್ವಮೇವ ತದಿಮಂ
ರಾಧೇಗೃಹಂ ಪ್ರಾಪಯ
ಇತ್ಥಂ ನಂದನಿದೇಶತಶ್ಚಲಿತಯೋಃ
ಪ್ರತ್ಯಧ್ವಕುಂಜದ್ರುಮಂ
ರಾಧಾಮಾಧವಯೋರ್ಜಯಂತಿ ಯಮುನಾ
ಕೂಲೇ ರಹಃಕೇಲಯಃ ॥

'ಬಾನತುಂಬ ಮುಗಿಲು ಕವಿದಿದೆ; ದಾರಿಯುದ್ದಕ್ಕೂ ತಾಳೆಮರಗಳ ಕರಿನೆರಳು ಚಾಚುತ್ತಿರುತ್ತವೆ. ರಾತ್ರಿಯಾಗುತ್ತಿದೆ. ಇವನೋ ಅಂಜುಬುರುಕ. ನೀನಾದರೂ ಇವನನ್ನು ಮನೆಸೇರಿಸು.' ಮಾತು ಮುಗಿಯುವುದೇ ತಡ, ರಾಧಾಮಾಧವರು ಹಳ್ಳಿಯ ಕಡೆ ಹೊರಟರು. ಆದರೆ ಅವರು ಮಾಡಿದ್ದೇನು ? ಯಮುನೆಯ ದಡದ ಬಳ್ಳಿಮಂಚಗಳಲ್ಲಿ ಕೇಲೀವಿಲಾಸಗಳನ್ನು ಮೊದಲು ಮಾಡಿದರು. ಕೃಷ್ಣ ಮಗುವಾಗಲಿ, ಪ್ರೌಢನಾಗಲಿ, ಅವನ ವ್ಯಕ್ತಿತ್ವ ವಿರಾಟ್‌ರೂಪದ್ದು. ಭಕ್ತರಿಂದ ಭಕ್ತಿಯ ಬೆಣ್ಣೆಯನ್ನು ಸಾಧ್ಯವಾದಷ್ಟು ಕಸಿದುಕೊಳ್ಳುವವನಾದ ಅವನು ದಯಾಮಯನೂ ಹೌದು. ಆದ್ದರಿಂದಲೇ ಜಯದೇವ ಕವಿ ತನ್ನ ಕೃತಿಗಳಲ್ಲಿ ಅಡಿಗಡಿಗೆ ಕೃಷ್ಣನ ದೈವತ್ವವನ್ನು ಜ್ಞಾಪಿಸುತ್ತಿರುತ್ತಾನೆ. ಈ ಸಾಮೋದ ದಾಮೋದರ ಹತ್ತಾವತಾರ ತಾಳಿದ ಲೋಕೈಕ ರಕ್ಷಕನೂ ಹೌದು. ಇವನು ಎಂತಹ ಮಹಾಮಹಿಮನೆಂದರೆ:—

ವೇದಾನುದ್ಧರತೇ ಜಗನ್ನಿವಹತೇ
ಭೂಗೋಲಮುದ್ಬಿಭ್ರತೇ
ದೈತ್ಯಾನ್ದಾರಯತೇ ಬಲಿಂ ಛಲಯತೇ
ಕ್ಷತ್ರಕ್ಷಯಂ ಕುರ್ವತೇ ।
ಪೌಲಸ್ತ್ಯಂ ಜಯತೇ ಹಲಂ ಕಲಯತೇ
ಕಾರುಣ್ಯಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿಕೃತೇ
ಕೃಷ್ಣಾಯ ತುಭ್ಯಂ ನಮಃ ॥

ವೇದಗಳನ್ನು ಉದ್ಧರಿಸಿದ, ಜಗತ್ತನ್ನು ಹೊತ್ತ (ಮತ್ಸ್ಯ–ಕೂರ್ಮ) ಭೂಗೋಲವನ್ನು (ದಾಡೆಯಲ್ಲಿ) ಎತ್ತಿಹಿಡಿದ, ದೈತ್ಯರನ್ನು ಸೀಳಿಹಾಕಿದ (ವರಾಹ–ನೃಸಿಂಹ), ಬಲಿಯನ್ನು ಮೋಸಗೊಳಿಸಿದ, ಕ್ಷತ್ರಿಯ ಸಂಹಾರಮಾಡಿದ (ವಾಮನ, ಪರಶುರಾಮ), ರಾವಣನನ್ನು ಗೆಲಿದ, ನೇಗಿಲು ಹೊತ್ತ (ರಾಮ–ಬಲರಾಮ), ಕರುಣಾಶಾಲಿಯಾದ, ಯವನರನ್ನು ಸದೆಬಡಿದ (ಬುದ್ಧ-ಕಲ್ಕಿ) ಈ ಹತ್ತವತಾರ ತಾಳಿದ ಕೃಷ್ಣ ನಿನಗಿದೋ ನಮ್ಮ ನಮನ! (ಬಲರಾಮ–ಕೃಷ್ಣರು, ಪರಮಾತ್ಮನ ಶುಕ್ಲಕೇಶಾವತರಾಗಳೆಂದು ಹೇಳಲಾಗಿದೆ)

"ಅಕ್ಲೇಶಕೇಶವನ" ಚೇಷ್ಟೆಗಳು ಎರಡನೆಯ ಸರ್ಗದ ವಸ್ತು. ರಾಧೆ ಮಾಧವನನ್ನು ನೆನೆಯುವ ಪರಿ;

ಸಂಚರದಧರಸುಧಾ ಮಧುರಧ್ವನಿ
ಮುಖರಿತಮೋಹನವಂಶಂ
ಚಲಿತದೃಗಂಚಲ ಚಂಚಲ ಮೌಲಿ
ಕಪೋಲವಿಲೋಲವತಂಸಂ
ರಾಸೇಹರಿಮಿಹ ವಿಹಿತವಿಲಾಸಂ
ಸ್ಮರತಿಮನೋ ಮಮಕೃತಪರಿಹಾಸಂ ॥

ಅಲುಗಾಡುವ ತುಟಿಯಿಂದ ಹೊರಸೂಸುವ ಕೊಳಲ ಇಂಪು, ಕಣ್ಣಂಚಿನಲ್ಲಿ ಚಾಂಚಲ್ಯವುಳ್ಳ, ಮೆಲುಗಾಳಿಯಲ್ಲಿ ಸರಿದಾಡುವ ಸುರುಳಿಗೂದಲಿನ, ಕೆನ್ನೆಯನ್ನು ಮೆಲ್ಲನೆ ಸವರುವ ಕುಂಡಲದ, ನಕ್ಕುನಗಿಸುವ ಮಾಧವನ ನೆನಪು ನನಗೆ ಬರುತ್ತಿದೆ. ಓಹ್ ಎಂತಹ ಸವಿನೆನಪದು ! ಈ ನೆನಪಿನ ಜೊತೆಗೊಂದು ಕುಡಿಯಾಸೆ ಮನದಲ್ಲಿ :—

ಹಸ್ತಸ್ರಸ್ತ ವಿಲಾಸವಂಶಮನೃಜು
ಭ್ರೂವಲ್ಲಿಮದ್ವಲ್ಲವೀ ವೃಂದೋತ್ಸಾಹ
ದೃಗಂತ ವೀಕ್ಷಿತ ಮತಿಸ್ವೇದಾರ್ದ್ರ
ಗಂಡಸ್ಥಲಮ್ ।
ಮಾಮುದ್ವೀಕ್ಷ್ಯ ವಿಲಜ್ಜಿತಂ ಸ್ಮಿತ
ಸುಧಾಮುಗ್ಧಾನನಂ ಕಾನನೇ

ಗೋವಿಂದ ವ್ರಜಸುಂದರೀಗಣವೃತಂ
ಪಶ್ಯಾಮಿ ಹೃಷ್ಯಾಮಿಚ ॥

ಗೆಳತಿಯರ ಗುಂಪಿನಲ್ಲಿ ಲಲ್ಲೆಗರೆಯುವ ಕೃಷ್ಣನಿಗೆ ಅನಿರೀಕ್ಷಿತವಾಗಿ ರಾಧೆ ಅಲ್ಲಿಗೆ ಬಂದಾಗ ನಾಚಿ, ಕೈಯ ಕೊಳಲು ಜಾರಿ, ಬೆವರು ಕೆನ್ನೆ ತೋಯಿಸಿದ್ದರೂ ಅವನ ಚೆಲುವ ಮೊಗದಲ್ಲಿ ನಸುನಗೆ ಮೂಡಬೇಕು; ಇಂತಹ ಗೋವಿಂದನನ್ನು ಕಾಣುವೆನೆ? ಜವ್ವನಿಯರ ಸಂಗ ಬಯಸಿದ ಮುಗ್ಧಮಾಧವ, ರಾಧೆಯನ್ನು ಕೆಲಕಾಲ ಕಾಣದೆ, ಯಮುನೆಯ ತೀರದಲ್ಲಿ ನಿರಾಶನಾಗಿ ಕುಳಿತುಬಿಟ್ಟ, ಗೋಪಿಯರೊಡನಾಟ ಅವನಿಗೆ ಸುಲಭವಾಗಿ ಸಿಕ್ಕಿದ್ದರೂ, ರಾಧೆಯಲ್ಲೇ ಅವನ ಮನಸ್ಸು ಅಂಟಿಕೊಂಡಿತ್ತು. ಮನ್ಮಥನನ್ನು ಮನಸಾರೆ ನಿಂದಿಸಿಬಿಟ್ಟ ಮುಗ್ಧ ಮಧುಸೂದನ.

ಹೃದಿ ವಿಲಸತೇ ಹಾರೋ ನಾಯಂ
ಭುಜಂಗಮ ನಾಯಕಃ
ಕುವಲಯದಲಶ್ರೇಣೀ ಕಂಠೇ
ನ ಸಾ ಗರಲದ್ಯುತಿಃ
ಮಲಯಜರಜೋ ನೇದಂ
ಭಸ್ಮ ಪ್ರಿಯಾರಹಿತೇ ಮಯಿ
ಪ್ರಹರ ನ ಹರಭ್ರಾಂತ್ಯಾನಂಗ
ಕೃಧಾಕಿಮುಧಾವಸಿ ॥

'ಎಲೆ ಮದನ, ನನ್ನನ್ನು ಶಿವನೆಂದು ಬಗೆದು ದ್ವೇಷವನ್ನು ವ್ಯರ್ಥವಾಗಿ ಸಾಧಿಸಬೇಡ. ನನ್ನೆದೆಯ ಮೇಲಿರುವುದು ಹಾವಲ್ಲ; ಹಾರ. ಕನ್ನೈದಿಲೆಯ ಸರ ನನ್ನ ಕೊರಳ ಬಳಸಿದೆ; ಹಾಲಾಹಲದ ಪ್ರಭೆ ಅದಲ್ಲ. ಗೆಳತಿಯ ವಿರಹದಿಂದ ನನ್ನ ಮೈಮೇಲಿನ ಶ್ರೀಗಂಧಲೇಪ ಒಣಗಿದ್ದನ್ನು ಭಸ್ಮವೆಂದು ಭ್ರಮಿಸಬೇಡ'—ಇದು ಎರಡನೆಯ ಸರ್ಗದ ನಾಯಕ 'ಮುಗ್ಧ ಮಧುಸೂದನನ' ವಿಲಾಪ. ರಾಧೆಯ ಸನಿಯದಲ್ಲಿ ತಾನಿದ್ದಾಗಲಿನ ಮಧುರ ಅನುಭವಗಳು ಅವನ ಮನದ ತೆರೆಯಮೇಲೆ ಮರು ಮೂಡುತ್ತಿವೆ. ತನ್ನ ಮನದ ಬೇಗುದಿ ಮರೆಯಲು ಕೊಳಲನೂದಿದ ಚೆಲುವ ಕೇಶವ.

ತಿರ್ಯಕ್ಕಂಠವಿಲೋಲ ಮೌಲಿ
ತರಲೋತ್ತಂಸಸ್ಯ ವಂಶೋಚ್ಚರತ್
ದೀಪ್ತಿಸ್ಥಾನ ಕೃತಾವಧಾನ
ಲಲನಾಲಕ್ಷೈರ್ನ ಸಂಲಕ್ಷಿತಾಃ
ಸಮುಗ್ಧಂ ಮಧುಸೂದನಸ್ಯ ಮಧುರೇ
ರಾಧಾಮುಖೇಂದೌ
ಸುಧಾಸಾರೇ ಕಂದಲಿತಾಶ್ಚಿರಂ ದಧತು ವಃ
ಕ್ಷೇಮಃ ಕಟಾಕ್ಷೋರ್ಮಯಃ ॥

ಕೊಳಲನೂದುವಾಗ ಮಧುಸೂದನನ ತಲೆಯ ಮೇಲ ನವಿಲುಗರಿ ನಲಿಯುತ್ತದೆ. ಗೊಲ್ಲಯುವತಿಯರು ಆ ರಾಗಮಾಧುರ್ಯವನ್ನನುಭವಿಸುವ ಅವನಲ್ಲೇ ನೆಟ್ಟ ನೋಟವುಳ್ಳವರಾದರೂ ಅವನ ಕುಡಿನೋಟ ರಾಧೆಯ ಮೊಗವೆಂಬ ಚಂದಿರನನ್ನೇ ನಿರೀಕ್ಷಿಸುತ್ತಾ ಇದೆ. ಕಣ್ಣನೋಟ ಸಾಗರದ ತೆರೆಗಳು ಚಂದ್ರನನ್ನು ನೋಡಿ ಉಕ್ಕುವಂತಾಗಿವೆ. (ಇಂತಹ ಮಧುಸೂದನನ ಕುಡಿನೋಟದ ಅಲೆಗಳು ನಮಗೆ ಕ್ಷೇಮವನ್ನುಂಟುಮಾಡಲಿ ಎನ್ನುತ್ತಾನೆ ಕವಿ)

ನಾಲ್ಕನೆಯ ಸರ್ಗದ ನಾಯಕ ಸ್ನಿಗ್ಧ ಮಧುಸೂದನ. ರಾಧೆಯ ವಿರಹದಿಂದ ಹುಚ್ಚಾದ ಮಾಧವ ಗೋಪಕನ್ಯೆಯೊಬ್ಬಳನ್ನು ಆಲಿಂಗಿಸಿ ಚುಂಬಿಸಿದ.

ವೃಷ್ಟಿವ್ಯಾಕುಲ ಗೋಕುಲಾವನ
ವಶಾದುದ್ಧೃತ್ಯ ಗೋವರ್ಧನಂ
ಬಿಭ್ರದ್ಬಲ್ಲವ ಸುಂದರೀಭಿರಧಿಕಾ
ನಂದಾಚ್ಚಿರಂ ಚುಂಬಿತಃ
ದರ್ಪೇಣೈವ ತದರ್ಪಿತಾಧರತಟೇ
ಸಿಂಧೂರಮುದ್ರಾಂಕಿತೋ
ಬಾಹುರ್ಗೋಪತನೋಸ್ತನೋತು
ಭವತಾಂಶ್ರೇಯಾಂಸಿ ಕಂಸದ್ವಿಷಃ ॥

ವಿಪರೀತ ಮಳೆಯಿಂದ ಕಂಗೆಟ್ಟಿದ್ದ ಗೋಕುಲದ ಜನತೆಯನ್ನು ಗೋವರ್ಧನಗಿರಿಹೊತ್ತು ರಕ್ಷಿಸಿದ ಕೃಷ್ಣನನ್ನು ನೋಡಿ ತಡೆಯಲಾರದ ಆನಂದದಿಂದ ಗೋಪಿಯರು ಚುಂಬಿಸಿದರು. ಅವನನ್ನು ಆಲಿಂಗಿಸಿದಾಗ ಅವರ ಸಿಂಧೂರದ ಮುದ್ರೆ ಅವನ ತೋಳಮೇಲೆ ಮೂಡಿತ್ತು. ಇಂತಹ ಸ್ನಿಗ್ಧ ಪ್ರೇಮಿ ಮಧುಸೂದನನ ತೋಳು ನಮ್ಮ ಒಳಿತಿಗಾಗಲಿ.

ಐದನೆಯ ಸರ್ಗ ಸಾಕಾಂಕ್ಷಪುಂಡರೀಕನ ವರ್ಣನೆ. ರಾಧೆಯ ಗೆಳತಿಯೊಬ್ಬಳು ಅವಳನ್ನು ಮಾಧವನಲ್ಲಿಗೆ ಕಳುಹಿಸುವ ಬಗೆ ಇಲ್ಲಿ ಮೂಡಿದೆ ನೋಡು ರಾಧೆ,

ತ್ವದ್ವಾಮ್ಯೇನ ಸಮಂ ಸಮಗ್ರಮಧುನಾ
ತಿಗ್ಮಾಂಶುರಸ್ತಂಗತಃ
(ನಿನ್ನೊರಟು ನಡವಳಿಕೆಯಿಂದ ಸೂರ್ಯ
ಮುಳುಗಿಯೇ ಬಿಟ್ಟ)
ಗೋವಿಂದಸ್ಯ ಮನೋರಥೇನ ಚ
ಸಮಂಪ್ರಾಪ್ತಂ ತಮಃ ಸಾಂದ್ರತಾಂ
(ಕೃಷ್ಣನ ಕಂದಿದಾಸೆಯ ಜೊತೆ ಕತ್ತಲೆ
ಹಬ್ಬಿತು)
ಕೋಕಾನಾಂ ಕರುಣಸ್ವರೇಣ
ಸದೃಶೀದೀರ್ಘಾ ಮದಭ್ಯರ್ಥನಾ
(ನನ್ನ ಅನುನಯ ಚಕ್ರವಾಕಗಳ ಕರುಳ
ಕೂಗಿನಂತಿದೆ)
ತನ್ಮುಗ್ಧೇ ವಿಫಲಂ ವಿಲಂಬನಂ
ಅಸೌರಮ್ಯಃ ಅಭಿಸಾರಕ್ಷಣಃ
(ಎಲೆ ಮುಗುದೆ, ತಡಮಾಡದಿರು, ಅಭಿಸಾ
ರಕ್ಕಿದು ಸರಿಯಾದವೇಳೆ ನಡೆ)

ಹೀಗೆ ಪುಂಡರೀಕಾಕ್ಷನ ಆಕಾಂಕ್ಷೆ ಒಂದೆಡೆಯಾದರೆ ರಾಧೆಯ ಅರೆಮನದ ಆಸೆ ಇನ್ನೊಂದೆಡೆ. ಏಕೆಂದರೆ ಹೆಣ್ಣಿನ ತುಸುಬಿಂಕ ಅವಳಿಗಿದೆ. ಮಾಧವನೇ ನನ್ನೆಡೆ ಬರಲಿ, ನಾನೇಕೆ ಹೋಗಲಿ ಎಂಬಹ.

ಆರನೆಯ ಸರ್ಗದಲ್ಲಿ ರಾಧೆಯ ವಿರಹತಪ್ತ ಮನದ ಬಣ್ಣನೆ. ಮಾಧವನ ವಿರಹವೊಂದು ಕಡೆ ಅವಳನ್ನು ಕಾಡುತ್ತಿದ್ದರೆ ಹೆಣ್ಣಿನ ಬಿಂಕವೊಂದೆಡೆ. ರಾಧೆಯ ಹಳ್ಳಿಯಿಂದ ಬಂದ ದಾರಿಗರು ಅವಳ ದೀನ ಸ್ಥಿತಿಯನ್ನು ಎಲ್ಲಾದರೂ ತಂದೆ ನಂದಗೋಪನೆದುರು ಬಣ್ಣಿಸಿಯಾರೆಂದು ಹೆದರಿದ ಕೃಷ್ಣ ಅವರನ್ನು ಸಾಗಹಾಕುವ ಬಗೆ :

ಕಿಂ ವಿಶ್ರಾಮ್ಯಸಿ ಕೃಷ್ಣಭೋಗಿಭವನೇ
ಭಾಂಡೀರಭೂಮೀರುಹೆ
ಭ್ರಾತರ್ಯಾಸಿ ನದೃಷ್ಟಿಗೋಚರಮಿತಃ
ಸಾನಂದ ನಂದಾಸ್ಪದಂ
ರಾಧಾಯಾ ವಚನಂ ತದಧ್ವಗ ಮುಖಾ
ನ್ನಂದಾಂತಿಕೇ ಗೋಪತಃ
ಗೋವಿಂದಸ್ಯ ಜಯಂತಿ ಸಾಯ ಮತಿಥಿ
ಪ್ರಾಶಸ್ತ್ಯಗರ್ಭಾಗಿರಃ ॥

'ಎಲೆದಾರಿಗ, ಈ ಕರಿನಾಗರ ನೆಲೆಸಿರುವ ದೊಡ್ಡ ಪೊಟರೆಯ ಸನಿಯಲ್ಲೇಕೆ ವಿಶ್ರಾಂತಿ ಪಡೆಯುತ್ತೀ? ಅಲ್ಲೇ ನಂದರು ವಾಸಿಸುವ ಗ್ರಾಮ ಕಾಣಲಾರೆಯ? ಅದಷ್ಟು ಬೇಗ ಇಲ್ಲಿಂದ ಹೊರಡುವುದು ಕ್ಷೇಮವಪ್ಪ'— ಎಂಬ ಕೃಷ್ಣನ ಜಾಣನುಡಿ! ಈ ಸರ್ಗದ ನಾಯಕನನ್ನು ಧನ್ಯವೈಕುಂಠ ಕುಂಕುಮ ಎಂದಿದ್ದಾರೆ.

ಏಳನೆಯಸರ್ಗ ನಾಗರನಾರಾಯಣನ ಚತುರತೆಯ ಚಿತ್ರ, ಹೇಗಾದರೂ ಮಾಡಿ ರಾಧೆಯನ್ನು ಬುಟ್ಟಿಗೆ ಹಾಕಿಕೊಳ್ಳುವ ಛಲ.

ಕೆಲ ರಾತ್ರಿಗಳನ್ನು ದೂಡಿದ ರಾಧೆಗೆ ಮಾಧವನ ದರ್ಶನವಾಗಿಯೇ ಬಿಟ್ಟಿತು. ಸೋತ ಕೃಷ್ಣ ಅವಳಲ್ಲಿಗೆ ಬಂದ. ವಿಲಕ್ಷ್ಯ ಲಕ್ಷ್ಮೀಪತಿ ಅವನು ಅಲ್ಲವೆ? ಭೈರವೀರಾಗದ ಗೀತಗಳು ಈ ಸರ್ಗದ (ಎಂಟನೆಯಸರ್ಗದ) ಸೊಬಗನ್ನು ಸೂಚಿಸುತ್ತವೆ.

ಒಂಬತ್ತನೆಯ ಸರ್ಗದಲ್ಲಿ ಮುಗ್ಧ ಮುಕುಂದನ ಮುಗುಳ್ನಗೆ, ಅವನ ಸುಂದರ ಪಾಟಲವಾದ ಪಾದದ ವರ್ಣನೆ;

ಸಾಂದ್ರಾನಂದ ಪುರಂದರಾದಿ ದಿವಿಷದ್ವೃಂ
ದೈರಮಂದಾದರಾತ್
ಆನಮ್ರೈರ್ಮುಕುಟೇಂದ್ರನೀಲ ಮಣಿಭಿಃ
ಸಂದರ್ಶಿತೇಂದೀವರಂ ।

(27 ನೇ ಪುಟನೋಡಿ)

# ನಂಬಿಕೆಗಳು

—' ರಸಿಕ ಪುತ್ತಿಗೆ '

ನೂರಾರು ನಂಬಿಕೆಗಳು ಜನಾಂಗಗಳಲ್ಲಿ– ಊರಿಂದೂರಿಗೆ ಕೇರಿಯಿಂದ ಕೇರಿಗೆ ಬೇರೆ ಬೇರೆಯಾಗಿ ಇರುತ್ತವೆ. ಹಳೆಯಕಾಲದ ನಂಬಿಕೆಗಳು ಮಾಯವಾಗಬಹುದು–ಹೊಸತು ಹುಟ್ಟಬಹುದು. ಬೇರೆ ದೇಶದಿಂದ ನಂಬಿಕೆಗಳು ವಲಸೆ ಬರಬಹುದು –ವಲಸೆ ಹೋಗುವುದೂ ಇದೆ. ಹಿರಿಯರು, ಅನುಭವಿಗಳೆಂದು ಅನ್ನಿಸಿದವರು ಹೇಳಿದರೆ ಸಾಕು, ಮುಗ್ಧ ಮನಸ್ಸಿನ ಜನ ನಂಬುತ್ತಾರೆ– ಅದರಂತೆ ನಡೆಯುತ್ತಾರೆ.

ತಾಯಿ ಮಗುವಿನ ಅಳು ನಿಲ್ಲಿಸಲು 'ಅಳಬೇಡ ಗೊಗ್ಗಯ್ಯ ಬತ್ತಾನೆ' ಎಂದೋ 'ಊಟ ಮಾಡ ದಾಗ 'ಬೇಗ ಊಟ ಮಾಡು ಇಲ್ವಾದ್ರೆ ದೆವ್ವ ಬರುತ್ತೆ' ಎಂದೋ ಹೆದರಿಸಿ ತನ್ನ ಕಾರ್ಯ ಸಾಧಿಸಿ ಕೊಂಡು ಬಿಡುವುದಿದೆ. ಬಳಿಕ ಬುದ್ಧಿ ಬಲಿಯುವ ವರೆಗೂ ಆ ಮಗುವಿಗೆ ಗೊಗ್ಗಯ್ಯನನ್ನು ಕಂಡರೆ ವಿಕಾರ ವೇಷದ ಭಿಕ್ಷುಕನನ್ನು ಕಂಡರೆ – ಕತ್ತಲು ನೋಡಿದರೆ ಭಯ ಇರುತ್ತದೆ. ನೋಡದಿದ್ದರೂ ನಂಬುತ್ತದೆ: ನೋಡಿದರೂ ಭ್ರಮನಿರಸನ ವಾಗುವತನಕ ನಂಬಿಕೆ ಇದ್ದೇ ಇರುತ್ತದೆ. ಇವು ಹಾಗೂ ಇಂಥವು ಭೀತಿಜನ್ಯ ನಂಬಿಕೆಗಳು.

ನಮ್ಮ ನಂಬಿಕೆಗಳಲ್ಲಿ ಸಿಂಹಪಾಲು ಇಂಥ ಭಯ–ಭೀತಿಜನ್ಯಗಳದ್ದೇ. ಆ ಭಯ ದೇವರು, ಪಿಶಾಚಿ, ದೆವ್ವ, ಗೊಗ್ಗಯ್ಯ, ಪೋಲೀಸು – ಯಾವುದರದ್ದಾದರೂ ಇರಬಹುದು. ಒಮ್ಮೆ ಮನಸ್ಸಿನಲ್ಲಿ ನೆಲೆ ನಿಂತ ಭಯ ಅಂದರೆ ನಂಬಿಕೆ ಬಹಳ ಶ್ರಮದಿಂದ ದೂರವಾದರೂ ಅದರ ವಾಸನೆಯನ್ನು ಬಿಟ್ಟಿರುತ್ತದೆ.

ಪ್ರಕೃತ ನಾವು ವಿವೇಚಿಸಲಿರುವುದು ಇಂಥ ಭೀತಿಜನ್ಯ ನಂಬಿಕೆಗಳನ್ನಲ್ಲ. ನಾವು ನೋಡ ಬೇಕಾದುದು ಶತಮಾನಗಳಿಂದ ಆಚರಣೆಯಲ್ಲಿ ರುವ ಹತ್ತು ಹಲವು ನಂಬಿಕೆಗಳು ಹಾಗೆ ಬಾಳಿ ಬದುಕಿರುವುದು ಯಾಕೆ–ಮತ್ತು ಹೇಗೆ? ಹಾಗೆ ಬದುಕಿರಲು ಕಾರಣವೇನು? ಅವುಗಳಲ್ಲೇನಾದರೂ ಸತ್ಯ, ಸತ್ವವಿದೆಯೇ? ಅಥವಾ ಅವು ಬರಿಯ ಕಾಕತಾಳೀಯವೆ? ಸಾಂದರ್ಭಿಕ–ಆಕಸ್ಮಿಕಗಳೇ? ಅಂಥ ನಂಬಿಕೆಗಳಲ್ಲಿ ಏನಾದರೂ ಅರ್ಥವಿದೆಯೆ? ಎಂದು.

ಈಗ ಒಂದೊಂದಾಗಿ ಪ್ರಚಲಿತವಿರುವ ಪ್ರಸಿದ್ಧ ನಂಬಿಕೆಗಳನ್ನು ನೋಡುವ. ದೇವಸ್ಥಾನಕ್ಕೆ ಹೋದರೆ ಹಾಗೇ ಬರಬಾರದು. ಕ್ಷಣಕಾಲವಾದರೂ ಕುಳಿತು ಬರಬೇಕು. ದೇವರನ್ನು ನೋಡಲು ನಾವು ದೇವಾಲಯದವರೆಗೂ ಹೋಗಬೇಕೆ? ಹೋದರೂ ಆತ ಅಲ್ಲಿ ಇದ್ದಾನೆಯೇ? ಎಂದು ಪ್ರಶ್ನಿಸುವ ಜನರಿಗೆ ಮೇಲಿನ ನಂಬಿಕೆಗೆ ಅರ್ಥ ಆಧಾರ ಸಿಗುವುದಿಲ್ಲ. ಇರಲಿ. ದೇವಾಲಯ ಗಳು ನಮ್ಮ ಸಂಸ್ಕೃತಿ, ಕಲೆಗಳ ಆಗರ. ಶಿಲ್ಪ ಸಾಹಿತ್ಯಗಳ ಭಂಡಾರ. ಹತ್ತು ಜನ ಸೇರುವಲ್ಲಿ ದೈವಸಾನ್ನಿಧ್ಯವಿರುತ್ತದೆ. ಹತ್ತು ಜನ ಒಂದು ಗುಂಡುಕಲ್ಲಿಗೇ ಆದರೂ ನಮಿಸಿದರೆ ಆ ಜನರ ಶ್ರದ್ಧಾಕೇಂದ್ರವಾದ ಆ ಜಾಗದಲ್ಲಿ ಏನಾದ ರೊಂದು ರೀತಿಯ ಶಕ್ತಿಯ ಸಾನ್ನಿಧ್ಯವಿದ್ದೇ ಇರುತ್ತದೆ. ಕಣ್ಣು, ಮನಸ್ಸು, ತಣಿಸುವ ಕಲಾ ಪೂರ್ಣ ಮಂದಿರ, ಅದರ ಅಲಂಕಾರ, ಭಾವನೆ ಗಳಿಗೆ ಜೋಡನೆ ನೀಡುವ ಅಲ್ಲಿನ ಪರಿಸರಗಳು ಒಂದು ವಿಧದ ನೆಮ್ಮದಿ, ಶಾಂತಿ, ನೀಡುವುದರಲ್ಲಿ ಸಂದೇಹವಿಲ್ಲ. ದೇವರು ನಾವು ಬಯಸಿದಂತೆ ಎದ್ದು ಬಂದು 'ಏನು ಭಕ್ತಾ?' ಎಂದು ವಿಚಾರಿಸ ಲಾರನಾದರೂ ನಮ್ಮ ದುಃಖಗಳನ್ನು ಪ್ರಾರ್ಥನಾ ರೂಪದಲ್ಲಿ ನಿವೇದಿಸಿದಾಗ ಸಹನೆಯಿಂದ ಕೇಳ್ಳ ತ್ತಾನಲ್ಲ? ಹಾಗೆ ಹೇಳಲು ಅಂಥ ಒಂದು ಜಾಗ ವಿದೆಯಲ್ಲ. ಅದೇ ಮಾನಸಿಕ ನೆಮ್ಮದಿ ನೀಡುವ ಜಾಗ. ನಮಸ್ಕರಿಸುವ ಕೆಲಸ ಆದ ಕೂಡಲೇ ಎದ್ದು ಬರಲು ದೇವಾಲಯದರ್ಶನ ಒಂದು ವ್ಯಾಪಾರವಲ್ಲ. ಮಾನಸಿಕ ನೆಮ್ಮದಿಗಾಗಿ ಇಚ್ಛೆ ಇದ್ದು ಮಾಡುವ ಕಾರ್ಯವದು. ಹಾಗಾಗಿ ಅಂಥಲ್ಲಿ ಅವಸರ ಸಲ್ಲದು. ಒಂದು ಕ್ಷಣವಾದರೂ ಕುಳಿತು ಅಲ್ಲಿನ ವಾತಾವರಣ, ಕಲೆ, ಶಿಲ್ಪವನ್ನು ಅವ ಲೋಕಿಸಿ ಮನಸ್ಸಿಗೆ ನೆಮ್ಮದಿ ತಂದುಕೊಳ್ಳ ಬಹುದು. ಇದು ಮೇಲಿನ ನಂಬಿಕೆಯ ಒಂದು ಮುಖ. ಇನ್ನೊಂದು ಮುಖವೆಂದರೆ ಅಲ್ಲಿಗೆ ನಮ್ಮ ಹಾಗೆ ನಮ್ಮ ನೆರೆಕರೆಯವರು – ಬಂಧುಗಳು ಯಾರಾದರೂ ಬಂದಿರಬಹುದು. ಅಥವಾ ನಾವು ಬಂದು ಹೋಗುವ ಅವಧಿಯ ಸ್ವಲ್ಪನಂತರ ಏನಾದರೂ ವಿಶೇಷ ಪೂಜೆ ನಡೆಯಬಹುದು– ಅದು ನಮಗೆ ದೊರೆಯದೆ ತಪ್ಪಿಹೋಗಬಹುದು, ಹಾಗಾಗಿ ಬಂದವರು ತುಸು ಹೊತ್ತು ಇರಬೇಕು. ತರ್ಕದಿಂದ ನಂಬಿಕೆಯನ್ನು ಬಲಪಡಿಸಲಾಗದು. ಹಾಗಾಗಿ ಅವರವರಿಗೆ ಅನ್ನಿಸಿದಂತೆ–ನಂಬಿಕೆಯ ಆಚರಣೆ ಸರಿ ಕಂಡರೆ ಆಚರಿಸಬಹುದು.

# ಯುವವಾಣಿ

## ಶಕುನಗಳು :

ಯಾವುದಾದರೂ ಕಾರ್ಯಕ್ಕೆ ಹೊರಟಾಗ ಮನೆಯ ಮುಕ್ಕಾಳಾದರೂ ಸರಿ 'ಎಲ್ಲಿಗೆ?' ಎಂದು ಕೇಳಿದರೆ ಕೆಲಸವಾಗುವುದಿಲ್ಲವೆಂಬ ನಂಬಿಕೆ ಇದೆ. ಇದು ಫಲಿಸುತ್ತದೆಯೆ? ಎಂದು ಪ್ರಶ್ನಿಸಿದರೆ ಕೆಲವು ಸಲ ಫಲಿಸುತ್ತದೆ– ಕೆಲವು ಸಲ ಫಲಿಸುವು ದಿಲ್ಲ. ನಾವು ಒಂದು ಕೆಲಸ ಮಾಡುವುದಕ್ಕೆ ಮೊದಲು ಸಲಕರಣೆಗಳ ಸಿದ್ಧತೆ ನಡೆಸಿದಂತೆ ಮಾನಸಿಕ ಸಿದ್ಧತೆಯನ್ನೂ ಮಾಡಿಕೊಳ್ಳುತ್ತೇವೆ. ಹಾಗೆ ಸಿದ್ಧತೆ ಮಾಡಿಕೊಂಡು ನೆಟ್ಟಗೆ ಹೊರ ಟಾಗ 'ಎಲ್ಲಿಗೆ?' ಎಂದು ಯಾರಾದರೂ ಒರಟಾಗಿ ಕೇಳಿದರೆ–ಬರ ಸಿಡಿಲಿನಂತೆ ವಿಚಾರಿಸಿದರೆ ನಮ್ಮ ಸಂಕಲ್ಪ ವಿಚಲಿತವಾಗಿ ಕಾರ್ಯ ಕೆಡುತ್ತದೆ. ಅಥವಾ ಯಾರಿಗಾದರೂ ಆರೀತಿ ಒಂದೆರಡು ಸಲ ಆಗಿರಬಹುದು. ಅವರು ಆ ಭಾವನೆಯನ್ನು ತೇಲಿಬಿಟ್ಟರು. ಆ ಭಯ–ಅಳುಕು ಮನಸ್ಸಿನಲ್ಲಿ. ಅಂಜಿದವರಿಗೆ ಅದೇ ಅಳುಕು ಮಾನಸಿಕವಾಗಿ ಕಿರುಕುಳ ನೀಡಿ ಮಾಡುವ ಕೆಲಸದಲ್ಲಿ ವ್ಯತ್ಯಾಸ ವಾಗಿ ಕೆಲಸ ಹಾಳಾಗಬಹುದು. ಅಥವಾ ತಾನು ಸಾಧಿಸಲಿರುವ ಕಾರ್ಯವನ್ನು ಎಲ್ಲಿಗೆ ಎಂದು ಕೇಳಿದವರಿಗೆ ತಿಳಿಸಿದುದರಿಂದ ರಹಸ್ಯ ಬಯಲಾಗಿ ಅದು ತನ್ನ ವಿರೋಧಿಗಳಿಗೆ ತಿಳಿದು ಕೆಲಸ ಕೆಟ್ಟಿರಲೂ ಬಹುದು. ಅಂತೂ ಈ ನಂಬಿಕೆಗೆ ಬಲವಾದ ನೆಲೆ ಇಲ್ಲ. ಆದರೂ ಇದು ಬಳಕೆಯಲ್ಲಿ ಬದುಕಿಕೊಂಡಿದೆ. ಹಾಗೇ ಹೊರಗೆ ಹೊರಟಾಗ ಕೆಲವು ವ್ಯಕ್ತಿ, ವಸ್ತು, ಪ್ರಾಣಿ ಇದಿರಾದರೆ ಎಡದಿಂದ ಬಲಕ್ಕೆ ಹಾದು ಹೋದರೆ ಅಥವಾ ಬಲದಿಂದ ಎಡಕ್ಕೆ ಹಾದು ಹೋದರೆ ಹೊರಟ ಕೆಲಸ ಆಗುವುದಿಲ್ಲವೆಂಬ ನಂಬಿಕೆ ಇನ್ನು ಬದು ಕಿದೆ. ವಿಧವೆ ಒಂಟಿಬ್ರಾಹ್ಮಣ, ಸೌದೆಹೊರೆ, ಖಾಲಿ ಬಿಂದಿಗೆ, ರಜಸ್ವಲೆ, ಊಳಿಡುವ ನರಿ, ಬೆಕ್ಕು, ಕಾಗೆ ಇತ್ಯಾದಿ ಇದಿರಾದರೆ ಕೆಲಸ ಕೆಡುತ್ತದೆಂಬ ನಂಬಿಕೆಗೆ ಕಾಕತಾಳೀಯವಾಗಿ ಸಂಭವಿಸಿದ ಘಟನೆಗಳದ್ದೇ ಆಧಾರ. ಮಾನಸಿಕ ನಂಬಿಕೆಗಳೇ ನೆಲೆ–ತಾರ್ಕಿಕ–ಶಾಸ್ತ್ರೀಯ ಆಧಾರ ಗಳಿಲ್ಲ. ಕನ್ಯೆ, ಹಸು, ಭೇರಿ, ಶಂಖ, ಮೊಸರು, ಹಣ್ಣು, ಹೂವು, ಬೆಂಕಿ, ವಾಹನ, ಕುದುರೆ, ಎತ್ತು, ಗಜ, ತುಂಬಿದ ಕೊಡ, ಇಬ್ಬರು ಬ್ರಾಹ್ಮಣರು, ಬ್ರಾಹ್ಮಣರ ಹೆಂಗಸು, ಹೆಣ, ಇತ್ಯಾದಿಗಳು ಇದಿರಾದರೆ ಕೆಲಸಗಳು ಕೈಗೂಡು ತ್ತವೆ ಎಂಬ ನಂಬಿಕೆ ಇದೆ. ಪರೀಕ್ಷಿಸಿದರೆ ಶೇಕಡಾ 80ರಷ್ಟು ಪರಿಣಾಮ ಸರಿ ಇರುತ್ತದೆ. ಇದಕ್ಕೆಲ್ಲ ನಂಬಿಕೆಯೇ ಆಧಾರ. ಶುಭದ ಮಾತಾಡುವಾಗ

ಒಂಟಿ ಸೀನು ಸೀನಬಾರದು. ಆಗ ಆ ಕೆಲಸ, ಆ ಮಾತು ಆಗುವುದಿಲ್ಲವೆಂಬ ನಂಬಿಕೆ ನಮ್ಮದು. ಒಂದು ವೇಳೆ ಯಾರಾದರೂ ಒಂಟಿ ಸೀನು ಸೀತರೆ ಇನ್ನೊಂದು ಸೀನುವಂತೆ ಹೇಳುತ್ತೇವೆ. ಯಾಕೆಂದರೆ ಎರಡು ನಲ ಸೀತರೆ ಕೆಲಸಕ್ಕೆ ಶುಭ ಕೋರಿದಂತೆ. ಸೀನು ಸಾಮಾನ್ಯವಾಗಿ ಶಾರೀರಿಕ ಕ್ರಿಯೆ. ಅದು ಅನಪೇಕ್ಷಿತವಾಗಿ ಬರುವಂತಹದು. ನಸ್ಯ ಸೇವಿಸುವವರು, ನೆಗಡಿಯಾದವರು ಸೀತರೆ ಅದಕ್ಕೆ ಬೆಲೆ ಇಲ್ಲವೆಂಬ ನಂಬಿಕೆಯೂ ಇದೆ. ಹಾಗಾದರೆ ಒಟ್ಟಿನಲ್ಲಿ ಅರ್ಥವೇನು?

ಈ ಶಕುನದ ಹಿನ್ನೆಲೆಯನ್ನು ಗಮನಿಸಿದಾಗ ಕಾರ್ಯದೆಡೆಗೆ ಇರುವ ಮಾನಸಿಕ ಸಿದ್ಧತೆಗೆ ಸ್ವಲ್ಪವೂ ಧಕ್ಕೆ ಬಾರದ ರೀತಿಯಲ್ಲಿ ಆ ಕೆಲಸ ಆಗಬೇಕು. ಸ್ವಲ್ಪವಾದರೂ ಧಕ್ಕೆ ಬಂದರೆ, ಕನಿಷ್ಠಪಕ್ಷ ಒಂದು ಸೀನಿನ ದನಿಯಾದರೂ ಕೇಳಿದರೆ ಮಾನಸಿಕ ಸಿದ್ಧತೆಗೆ ವ್ಯತ್ಯಯ ಉಂಟಾಗಿ ಕೆಲಸ ಹಾಳಾಗುತ್ತದೆಂಬ ದೌರ್ಬಲ್ಯವೇ ಈ ನಂಬಿಕೆಗಳಿಗೆ ಕಾರಣವಿರಬೇಕು. ಈ ರೀತಿಯ ದೌರ್ಬಲ್ಯಗಳು ನಮ್ಮಲ್ಲಿ–ಭಾರತೀಯರಲ್ಲಿ ಮಾತ್ರ ಇವೆಯೆ? ಎಂದರೆ, ಅಲ್ಲ. ಪ್ರಪಂಚದ ಎಲ್ಲ ಜನಾಂಗಗಳಲ್ಲಿಯೂ ಈ ತೆರನಾದ ದೌರ್ಬಲ್ಯದ ನಂಬಿಕೆಗಳಿವೆ. ನಮ್ಮಲ್ಲಿ ಇರುವಂಥವೇ ಅಲ್ಲಿ ಇಲ್ಲದಿರಬಹುದು. ಅಂತೂ ಆ ರೀತಿಯ ನಂಬಿಕೆಗಳಿವೆ.

ಒಂದು ಕೆಲಸಕ್ಕೆ ಮೂರು ಜನ ಒಟ್ಟಿಗೆ ಹೋಗಬಾರದು. ಮೂರು ವೀಳ್ಯದೆಲೆ ಕೊಡಬಾರದು. ಹಾಗೆ ಮಾಡಿದರೆ ಕೆಲಸ ಹಾಳಾಗುತ್ತದೆ–ಮನೆಗೆ ದಾರಿದ್ರ್ಯ ಬರುತ್ತದೆ– ಎಂಬ ನಂಬಿಕೆಗಳಿವೆ. ಇವು ಮೇಲಿನ ಹಾಗಿನವೇ.

ಅಳತೆ, ಎಣಿಕೆಗಳಲ್ಲಿ ಒಂದು–ಏಳು ಸಂಖ್ಯೆ ಉಚ್ಚರಿಸಬಾರದು. ಒಂದನ್ನು 'ಲಾಭ' ಎನ್ನಬೇಕು ಏಳನ್ನು 'ಹೆಚ್ಚಲಿ' ಎನ್ನಬೇಕು ಎಂಬ ನಂಬಿಕೆ ಇದೆ. ಇಂಥವು ಸಂಖ್ಯಾ ಶಕುನಗಳು ವಿದೇಶಗಳಲ್ಲಿಯೂ ಇವೆ. ಅಲ್ಲಿ ಹದಿಮೂರರ ಸಂಖ್ಯೆ ಕೆಟ್ಟದಂತೆ. ನಮ್ಮಲ್ಲಿ ಐದು ಒಂಬತ್ತುಗಳು ಶುಭ ಸಂಖ್ಯೆಗಳು.

ಈಚೆಗೆ ಕಾಲೇಜು ತರುಣಿಯರಲ್ಲಿ ಪ್ರಚಲಿತವಿರುವ ನಂಬಿಕೆಯೊಂದು ತಿಳಿದು ಬಂತು. ಅದು ಕಾಗೆಗಳ ಎಣಿಕೆಗೆ ಸಂಬಂಧಪಟ್ಟಂತೆ ಇದೆ. ಅವರು ಒಂದು ಕಾಗೆ ಕಂಡರೆ 'ಒನ್‌ಫರ್ ಸಾರೋ' ಎಂದು ತಿಳಿಯುತ್ತಾರೆ. ಎರಡಾದರೆ ಸಂತೋಷ. ಮೂರಾದರೆ ಪತ್ರ ಬರುತ್ತದೆ. ನಾಲ್ಕಾದರೆ ಗೆಳೆಯನೊಬ್ಬ ಇದಿರಾಗುತ್ತಾನೆ... ಐದಾದರೆ ಹಾಳು. ಆರಾದರೆ ಸೆಕ್ಸ್. ಏಳಾದರೆ ಸ್ವರ್ಗ. (ಒನ್‌ಫರ್ ಸಾರೋ, ಟೂಫರ್ ಜಾಯ್, ತ್ರೀಫರ್ ಲೆಟರ್, ಫೋರ್‌ಫರ್ ಬಾಯ್, ಫೈವ್‌ಫರ್ ಡೈ, ಸಿಕ್ಸ್‌ಫರ್ ಸೆಕ್ಸ್, ಸೆವೆನ್‌ಫರ್ ಹೆವೆನ್) ಈ ನಂಬಿಕೆ ಎಲ್ಲಿಂದ ಹೇಗೆ ಬಂತು? ಹೇಗೆ ನೆಲೆ ಊರಿತು ಎಂದು ತಿಳಿಯುವುದು ಕಷ್ಟ. ಆದರೂ ಜಾರಿಯಲ್ಲಿದೆ. ಮನೆಯ ಇದಿರುಗಡೆ ಕಾಗೆಯೊಂದು ಕೂಗುವ ದನಿ ಕೇಳಿ ನೆಂಟರು ಬರುತ್ತಾರೆಂದು ತರ್ಕಿಸುವ, ಅಥವಾ ಕೆಟ್ಟ ಸುದ್ದಿ ಬರುತ್ತದೆಂದು ತರ್ಕಿಸುವ ಗೃಹಿಣಿಯರು ಇಂದಿಗೂ ಇದ್ದಾರೆ. ನೆಂಟರ ಕಾಗೆ ಯಾವುದು, ಸಾವಿನ ಕಾಗೆ ಯಾವುದು ಎಂದು ಸ್ವರದಿಂದಲೇ ನಿರ್ಧರಿಸುತ್ತಾರೆ. ಯಾವುದಾದರೂ ಸಂಗತಿ ಹೇಳುತ್ತಿರುವಾಗ ಗಂಟೆ ಬಾರಿಸಿದ ಸದ್ದು ಕೇಳಿದರೆ ಕತ್ತೆ ಕೂಗಿದ ಸ್ವರ ಕೇಳಿದರೆ– 'ನೋಡಿದೆಯಾ ನಾನು ಹೇಳಿದ್ದು ಸತ್ಯ' ಎನ್ನುತ್ತಾರೆ. ಇಂಥ ಶಕುನ ಶಾಸ್ತ್ರವೇ ಒಂದಿದೆ. ಜ್ಯೋತಿಷ್ಯರಲ್ಲಿ ಈ ತೆರನಾದ ಲಕ್ಷಣಗಳಿಂದಲೇ 'ಪ್ರಶ್ನೆ' ಹೇಳುವ ಪರಿಪಾಟಿ ಇದೆ. ತನ್ನಲ್ಲಿರುವ ಪ್ರಶ್ನೆಗಳಿಗೆ ಉತ್ತರ ಕೇಳಲು ಹೋದಾಗ ಉತ್ತರ ಹೇಳುವಾತ ಬಂದವನು ಕುಳಿತ ರೀತಿ, ದಿಕ್ಕು, ಬಂದವೇಳೆಗಳನ್ನು ಲೆಕ್ಕಹಾಕಿ ನೀನು ಇಂಥ ಕಾರ್ಯಕ್ಕಾಗಿಯೇ ಬಂದಿದ್ದೀ– ಎಂದು ಕರಾರುವಾಕ್ಕಾಗಿ ಹೇಳುತ್ತಾನೆ. ಹಾಗೇ ಅತನ ಪ್ರಶ್ನೆಗೆ ಉತ್ತರವನ್ನು ಅದೇ ಲೆಕ್ಕದಿಂದ ಹೇಳುತ್ತಾನೆ. ನೂರರಲ್ಲಿ 60–70 ಉತ್ತರಗಳು ಫಲಿಸುತ್ತವೆ. ಸತ್ಯವಾಗಿರುತ್ತವೆ. ಉಳಿದವು ಯಾವುದಾದರೊಂದು ಲೆಕ್ಕ ತಪ್ಪಿ ತಪ್ಪಾಗುತ್ತವೆ. ಇಲ್ಲಿ ಹಲವು ಸಂದರ್ಭಗಳಲ್ಲಿ ಪ್ರತ್ಯಕ್ಷ ಅನುಮಾನಗಳು ಸಹಾಯ ಮಾಡುತ್ತವೆ. ಕೆಲವು ಸಂದರ್ಭಗಳಲ್ಲಿ ಲೆಕ್ಕಾಚಾರದಿಂದ ಫಲಿತಾಂಶ ಹೊರಡುತ್ತದೆ. ಜ್ಯೋತಿಷ್ಯವೂ ಶುಭ– ಅಶುಭ ಕಾಲ ನಿರ್ಣಯಿಸುವುದು ಲೆಕ್ಕಾಚಾರದಿಂದಲೇ. ಪ್ರಕೃತಿಯ –ಕಾಲದ–ಗತಿಯನ್ನು ಕಂಡುಕೊಂಡ ಹತ್ತು ಹಲವು ವಿಧದ ದೈವಜ್ಞರು ಜನರನ್ನು ಸುಲಿಗೆ ಮಾಡಲು ಮುಗ್ಧರನ್ನು ಸ್ವಂತದ ಲಾಭಕ್ಕಾಗಿ ಬಳಸಿಕೊಳ್ಳಲು ಮುಂದಾಗುವುದೂ ಇದೆ. ಹಾಗಾಗಿ ಇಂಥ ನಂಬಿಕೆಗಳಿಗೆ ಮೂಢನಂಬಿಕೆಗಳು ಎಂಬ ಹೆಸರೇ ಅಂಟಿದೆ. ದೇಶ ವಿದೇಶದ ನೂರಾರು ಬುದ್ಧಿವಂತರೆನ್ನಿಸಿಕೊಂಡವರೇ ಇಂಥ ನಂಬಿಕೆಗಳಿಗೆ ಶರಣಾಗಿದ್ದರು. ಅಂಥವರ ಆ ರೀತಿಯ ನಂಬಿಕೆಗಳ ಕಥೆ ಹತ್ತು ಹಲವು. ಅವುಗಳಿಗೆಲ್ಲ ಅವರು ಕಾರಣ ಕಂಡುಕೊಂಡಿದ್ದರೋ ಇಲ್ಲವೋ ತಿಳಿಯದು.

### ಭಕ್ತಿಪರ ನಂಬಿಕೆಗಳು:

ನಂಬಿಕೆಗಳಲ್ಲಿ ಭಕ್ತಿಪರ ನಂಬಿಕೆಗಳದೇ ಪ್ರಾಧಾನ್ಯತೆ. ಅವುಗಳಿಗೆ ಆಧಾರ ಭಕ್ತಿ. ಭಕ್ತಿಗೆ ಆಧಾರವೇನು? ಎಂದು ಪ್ರಶ್ನಿಸಿದರೆ ಮತ್ತೆ ನಂಬಿಕೆಯ ಹೆಸರು ಬರುತ್ತದೆ. ಭಕ್ತಿಗೆ ಭಯವೂ ಕಾರಣವಾಗಬಹುದು – ಶ್ರದ್ಧೆಯೂ ಕಾರಣವಾಗಬಹುದು. ಅಥವಾ ಭಯಮಿಶ್ರಿತ ಶ್ರದ್ಧೆ, ಶ್ರದ್ಧಾಮಿಶ್ರಿತ ಭಯ ಕಾರಣವಿರಬಹುದು. ಒಟ್ಟಿನಲ್ಲಿ ನಂಬಿಕೆಯು ಭಕ್ತಿ, ಶ್ರದ್ಧೆ ಭಯಗಳ ನೆಲದಲ್ಲಿ ನಿಂತಿದೆ. ನಂಬಿಕೆಗೆ ಇನ್ನೂ ಒಂದು ಕಾರಣ ಆಸೆ, ಆಕಾಂಕ್ಷೆ. ಮಕ್ಕಳಾಗಬೇಕೆಂಬ ಆಕಾಂಕ್ಷೆ ಕಂಡ

ಕಂಡ ದೇವರಿಗೆ ಹರಕೆ ಹೊರಲು ಪ್ರೇರಿಸಬಹುದು. ಇಲ್ಲಿ ಸ್ವಾರ್ಥವೇ ಹೊರತು ಭಯವಲ್ಲ ಭಕ್ತಿಯೂ ಪ್ರಧಾನವಲ್ಲ.

ಅಶ್ವತ್ಥ ವೃಕ್ಷಕ್ಕೆ ಪ್ರದಕ್ಷಿಣೆ ಬರುವುದರಿಂದ ಬಂಜೆತನ ನಿವಾರಣೆಯಾಗುತ್ತದೆಂಬ ಒಂದು ನಂಬಿಕೆ ಇದೆ. ಬಂಜೆತನಕ್ಕೆ ಇರುವ ಹಲವು ಕಾರಣಗಳಲ್ಲಿ ಯಾವುದೋ ಒಂದು ಕಾರಣವು ಪ್ರದಕ್ಷಿಣೆ ಬರುವಂತಹ ವ್ಯಾಯಾಮದಿಂದ ದೂರವಾಗಿ ಸಂತಾನ ಉಂಟಾಗಬಹುದು. ಈಚಿನ ತಿಳುವಳಿಕೆಯಂತೆ ಬೆಳಗಿನ ಹೊತ್ತೀ ಅಶ್ವತ್ಥ ವೃಕ್ಷದಿಂದ ಹೊರಸೂಸುವ ಒಂದು ರೀತಿಯ ರಾಸಾಯನಿಕ ಗಾಳಿಯು ಬಂಜೆತನವನ್ನು ನಿವಾರಿಸುತ್ತದೆ ಎಂದು ವೈಜ್ಞಾನಿಕವಾಗಿ ಸಾರಲಾಗಿದೆ. ಒಬ್ಬಾಕೆಗೆ ಫಲ ದೊರೆತರೆ ಸಾವಿರಾರು ಮಂದಿ ಮುಂದೆ ಬರುತ್ತಾರೆ. ಇದರಂತೆ ನಾಗಪ್ಪನಿಗೆ ತನಿ ಎರೆಯುವುದು, ದೇವರಿಗೆ ಮುಡಿ ಬಿಡುವುದು ಬಳಕೆಯಲ್ಲಿದೆ.

ದೇವರ ಪೂಜೆ ಮಾಡುವಾಗ ಎಡಗಡೆಯಿಂದ ಹೂವು ಬೀಳಬಾರದು. ದೀಪ ನಂದಿಹೋಗಬಾರದು, ದೀಪವನ್ನು ದೊಡ್ಡದು ಮಾಡಲು ಬೆರಳು ಹಾಕಬಾರದು–ಎಂಬ ನಿಷೇಧ–ನಂಬಿಕೆಗಳು ಇವೆ. ಎಡಗಡೆಯಿಂದ ಹೂವು ಬೀಳುವುದು, ದೀಪ ಆರಿಹೋಗುವುದು ಅಪಶಕುನ. ಅದು ಅಶುಭ. ಅದರಿಂದ ಪೂಜಾಕಾಲದಲ್ಲಿದ್ದ ಪ್ರಸನ್ನ ಚಿತ್ತಕ್ಕೆ ಗ್ಲಾನಿಯ ಮೋಡ ಕವಿಯುತ್ತದೆ. ಹಾಗಾಗುವುದರಿಂದ ಕೇಡಾಗುತ್ತದೆ ಎಂಬ ಪೂರ್ವನಂಬಿಕೆ ಇಲ್ಲದವನಿಗೂ ಸಹ ಒಂದು ತರದ ಅಳುಕು ಮೂಡುತ್ತದೆ. ದೀಪ ದೊಡ್ಡದು ಮಾಡಲು ಬೆರಳು ಹಾಕಬಾರದು ಎಂಬ ನಿಷೇಧಕ್ಕೆ ಅಚ್ಚುಕಟ್ಟುತನ ಕಾರಣವಿರಬಹುದು.

ಹುಟ್ಟು, ಸಾವು, ರಜೋದರ್ಶನಗಳ ಮುಹೂರ್ತದಿನಗಳನ್ನು ಲೆಕ್ಕಹಾಕಿ ಅವಕ್ಕೆ ಶುಭ ಅಶುಭ ನುಡಿಯುವ ಜ್ಯೋತಿಷ ಶಾಸ್ತ್ರ ಸಹಸ್ರಾರು ವರ್ಷಗಳಿಂದ ನಮ್ಮಲ್ಲಿ ಬದುಕಿದೆ. ಅಲ್ಲಿರುವುದೆಲ್ಲ ಗಣಿತ. ಆ ಗಣಿತ ತಪ್ಪೆಂದು ಹೇಳಲಾಗದು. ಗಣನೆಯಲ್ಲಿ ತಪ್ಪಾದರೆ ಫಲ ತಪ್ಪಾಗಬಹುದು. ಹಾಗಾಗಿ ಹತ್ತಾರು ಸಲ ಒಬ್ಬನ ಹುಟ್ಟಿನ ಬಗ್ಗೆ ನುಡಿದ ಫಲಗಳು ತಪ್ಪಾಗುವುದಿದೆ. ಜ್ಯೋತಿಷ ಶಾಸ್ತ್ರವು ಇಂದು ಅಪನಂಬಿಕೆಗೆ ಒಳಗಾಗಿದ್ದರೆ ಆ ಶಾಸ್ತ್ರದ ದೋಷದಿಂದಲ್ಲ. ಅದನ್ನು ಬಳಸುವ ಅರ್ಥ ಮಾಡಿಕೊಳ್ಳುವ ವ್ಯಕ್ತಿದೋಷದಿಂದ.

ಹಾಗೇ ಹುಟ್ಟಿನ ಫಲವೂ ಕೂಡಾ. ಕೆಲವು ಸೆಕೆಂಡುಗಳಷ್ಟು ವೇಳೆ ಬದಲಾದರೂ ಫಲಿತಾಂಶದಲ್ಲಿ ಏರುಪೇರಾಗುತ್ತದೆ. ಹಾಗಾಗಿ ಜ್ಯೋತಿಷ್ಯದ ನಂಬಿಕೆಗಳನ್ನು ಪೂರ್ತಿ ತಳ್ಳಿಹಾಕುವಂತಿಲ್ಲ. ಅವಕ್ಕೆ ಮೂಢ ನಂಬಿಕೆಗಳೆಂಬ ಹೆಸರು ಕಟ್ಟುವುದೂ ಸಾಧ್ಯವಲ್ಲ. ಅಮಾವಾಸ್ಯೆ, ಹುಣ್ಣಿಮೆ, ಗ್ರಹಣ, ಮಳೆ, ಮೋಡ, ಉಲ್ಕಾಪಾತಗಳನ್ನು ಕರಾರುವಾಕ್ಕಾಗಿ ಹೇಳುವ ಜ್ಯೋತಿಷ್ಯಶಾಸ್ತ್ರ ವಕ್ತೃದೋಷದಿಂದ ತಪ್ಪಿದರೆ ಶಾಸ್ತ್ರವೇ ತಪ್ಪೆಂದು ತಿಳಿಯಬಾರದು. ಶಾಸ್ತ್ರದ ಶಕ್ತಿಯನ್ನು ವ್ಯಕ್ತಿಯ ದೌರ್ಬಲ್ಯವನ್ನೂ ಬಳಸಿಕೊಂಡು ಸ್ವಾರ್ಥ ಸಾಧಿಸುವ ವ್ಯಕ್ತಿಗಳನ್ನು ನಾವು ವಿರೋಧಿಸಿದರೆ ತಪ್ಪಲ್ಲ

## ಮೂಢನಂಬಿಕೆಗಳು :

ತೆಂಗಿನ ಗಿಡ ನೆಡುವಾಗ ಕಟ್ಟೆಯನ್ನು ನಡಿಲವಾಗಿಟ್ಟುಕೊಂಡರೆ ತೆಂಗಿನ ಕಾಯಿಯ ಸಿಪ್ಪೆ ಸಲೀಸಾಗಿ ಸುಲಿಯಲು ಬರುವಂತೆ ಆ ಗಿಡದಲ್ಲಿ ತೆಂಗಿನ ಕಾಯಿ ಬೆಳೆಯುತ್ತದೆ.

ಮಗುವಿನ ಹೊಕ್ಕಳ ಬಳ್ಳಿಯನ್ನು ಕತ್ತರಿಸಿ ಬಿಸಾಡದೆ ಒಣಗಿಸಿ ಅದರ ತೊಟ್ಟಿಲಿನ ಹಗ್ಗಕ್ಕೆ ಬಟ್ಟೆಯಲ್ಲಿ ಸುತ್ತಿ ನೇತುಹಾಕಿದರೆ ಮಗುವಿಗೆ ಜ್ಞಾಪಕಶಕ್ತಿ ಹೆಚ್ಚು ಇರುತ್ತದೆ.

ಹೆಣ್ಣುಮಕ್ಕಳು ತೆಂಗಿನಕಾಯಿ ತಿಂದರೆ ಅಕ್ಕಿ ತಿಂದರೆ ಮದುವೆ ದಿನ ಮಳೆ ಬರುತ್ತದೆ.

ಒಂದೇ ಮಾತನ್ನು ಇಬ್ಬರು ಒಟ್ಟಿಗೇ ಹೇಳಿದರೆ ಏನೋ ವಿಶೇಷ ನಡೆಯುತ್ತದೆ.

ನಡೆಯುವಾಗ ಬಲಗಾಲಿಗೆ ಎಡವಿದರೆ ಧನ ಲಾಭ ಎಡಗಾಲಿಗೆ ನಷ್ಟ. ಇದು ಹೆಂಗಸರಿಗಾದರೆ ವಿರುದ್ಧವಾಗಿರುತ್ತದೆ.

ಮೂರು ಗಂಡುಮಕ್ಕಳಾದ ನಂತರ ಒಂದು ಹೆಣ್ಣು ಹುಟ್ಟಬಾರದು.

ಊಟ ಮಾಡುವಾಗ ಸೀನಬಾರದು. ಮನೆ ಹಾಳಾಗುತ್ತದೆ.

ಪ್ರಯಾಣ ಮಾಡುವಾಗ ಮುಂಗುಸಿ ಕಾಣಿಸಿದರೆ ಲಾಭ,

ಹೆಣ್ಣು ನೋಡಲು ಹೋದಾಗ ಹೆಣ್ಣು ಕಸ ಗುಡಿಸುತ್ತಿದ್ದರೆ ಆ ಹೆಣ್ಣನ್ನು ತರಬಾರದು.

ಆಷಾಢ ಮಾಸದಲ್ಲಿ ಅತ್ತೆ ಅಳಿಯ ಒಂದೇ ಮನೆಯಲ್ಲಿರಬಾರದು.

ಸೌದೆಯನ್ನು ಬುಡದಿಂದ ಉರಿಸಬಾರದು.

ರುಬ್ಬುವ ಕಲ್ಲಿನ ಮೇಲೆ ಕುಳಿತುಕೊಳ್ಳಬಾರದು.

ಎಡಗೈಯಿಂದ ಉಪ್ಪು ಬಡಿಸಬಾರದು.

ಬಾಳೆ ಎಲೆ ತರುವಾಗ ಒಂದೇ ಎಲೆ ತರಬಾರದು.

ಖಾಲಿ ಎಲೆಗೆ ಅನ್ನ ಬಡಿಸಬಾರದು.

ಉಗುರು ತೆಗೆದು ದಾರಿಯಲ್ಲಿ ಚೆಲ್ಲಬಾರದು.

ಅಕ್ಕ ತಂಗಿಯರು ಒಟ್ಟಿಗೆ ಅಳಿಗುಳಿ ಮನೆ ಆಟ ಬಾರದು.

ಕಾಗದ ಸುಡಬಾರದು.

ಅಮಾವಾಸ್ಯೆಯ ದಿನ ಕರು ಹಾಕಿದ ಹಸುವಿನ ಹಾಲು ಮನೆಯ ಯಜಮಾನ ಕುಡಿಯಬಾರದು.

ಮಧ್ಯರಾತ್ರಿ ಹುಂಜ ಕೂಗಿದರೆ ಅದನ್ನು ಕುಯ್ಯಬೇಕು.

ಮಕ್ಕಳಿಗೆ ಸಿಡುಬುರೋಗ ಬಂದರೆ ಮಾರಮ್ಮನ ಗುಡಿಗೆ ತಂಬಿಟ್ಟಿನ ಪೂಜೆ ಹಾಕಿಸಬೇಕು.

ಚಪ್ಪರಕ್ಕೆ ಮಾವಿನಕಂಬ ತರಬಾರದು.

ಮನೆಯ ಮುಂದೆ ಹತ್ತಿಯ ಗಿಡ ನೆಡಬಾರದು.

ಬ್ರಾಹ್ಮಣರು ಬೆಳ್ಳುಳ್ಳಿ ತಿನ್ನಬಾರದು

ಇಂಥ ಹತ್ತಾರು, ನೂರಾರು ನಂಬಿಕೆಗಳಿಗೆ ಯಾವುದೇ ರೀತಿಯ ಆಧಾರಗಳಿಲ್ಲ. ಇಲ್ಲಿ ಭಕ್ತಿ, ಶ್ರದ್ಧೆ, ಭಯ, ಶಾಸ್ತ್ರಗಳ ಯಾವ ಸೋಂಕೂ ಇಲ್ಲ. ಇವು ಕೇವಲ ರೂಢಿಯಲ್ಲಿ, ಪರಂಪರೆಯಿಂದ ಕಣ್ಣುಮುಚ್ಚಿಕೊಂಡು ಅನುಸರಿಸಿದ ನಂಬಿಕೆಗಳು, ಇಂಥವುಗಳನ್ನು ಮೂಢನಂಬಿಕೆಗಳೆಂದು ತೆಗೆದು ಹಾಕಬೇಕು. ಯಾವಾಗಲೋ ಒಮ್ಮೆ, ಯಾರೋ ಒಬ್ಬನಿಗೆ ಆಕಸ್ಮಾತ್ ಈ ರೀತಿ ಸಂಭವಿಸಿ ಒಳಿತು–ಕೆಡುಕು ಆಗಿರಬಹುದು. ಆತ ಪ್ರಭಾವಶಾಲಿ ವ್ಯಕ್ತಿ ಇದ್ದಿರಬಹುದು. ಆತನ ಮಾತಿಗೆ ಜನ ತಲೆದೂಗಿರಬಹುದು. ಅದು ಹಾಗೇ ರೂಢಿಗೆ ಬಂದಿರಬಹುದು. ಅಂದ ಮಾತ್ರಕ್ಕೆ ಅದು ತ್ರಿಕಾಲಾಬಾಧಿತ ಸತ್ಯವಲ್ಲ. ಯಾವುದೋ ತಾತ್ಕಾಲಿಕ ಕಾರಣಕ್ಕಾಗಿ ಸಾಂದರ್ಭಿಕವಾಗಿ ಒಂದು ಕ್ರಮ ರೂಢಿಗೆ ಬಂದು ಕೆಲ ಕಾಲ ಬದುಕಿದ್ದಿರಬಹುದು. ಅಂದಮಾತ್ರಕ್ಕೆ ಅದು ಇಂದಿಗೂ ಅನುಕರಣೀಯವಾಗಬೇಕಿಲ್ಲ. 'ಪುರಾಣಮಿತ್ಯೇವನ ಸಾಧು ಸರ್ವಂ'ಹಳೆಯದೆಂದ ಮಾತ್ರಕ್ಕೆ ಎಲ್ಲವೂ ಸರಿಯಲ್ಲ. ಎಂಬ ಕವಿವಾಣಿ ಇದೆ. ಹಾಗೇ ಹಳೆಯದೆಂದ ಮಾತ್ರಕ್ಕೆ ಎಲ್ಲವೂ ತಪ್ಪು ಕೂಡಾ ಅಲ್ಲ. ಅರ್ಥವಿರುವ ಆಚರಣೆಗಳನ್ನು ಅರಿತು ಆಚರಿಸುವ ಕ್ರಮ ಒಳ್ಳೆಯದು.

ಇವುಗಳ ಜೊತೆಗೆ ಪಂಚಾಂಗಗಳಲ್ಲಿ ಪ್ರಚಲಿತವಿರುವ ಹಲ್ಲಿ ಬಿದ್ದುದರ ಫಲ, ಅಂಗ ಸ್ಫುರಣಫಲ, ಸ್ವಪ್ನಫಲಗಳೂ ಕೂಡಾ ನಂಬಿಕೆಯ ಆಧಾರದ ಮೇಲೆಯೇ ನಿಂತಿವೆ.

ಈ ಫಲಗಳಿಗೆ ಆಧಾರವಿಲ್ಲ, ತರ್ಕದ ಬೆನ್ನೆಲುಬು ಇಲ್ಲ. ಲೆಕ್ಕದ ಗಣಿತವೂ ಸಿಗದು. ಹಲವು ಜನರ ಹಲವು ಕಾಲದ ಒಂದೇ ತೆರನಾದ ಅನು

(23 ನೇ ಪುಟ ನೋಡಿ)

# ಮೊದಲ ನಟನಟಿಯರು

ಮಹೀಸಾದಾ ಘಾತಾದ್ವ್ರಜತಿ
ಸಹಸಾ ಸಂಶಯುಪದಂ
ಪದಂ ವಿಷ್ಣೋರ್ ಭ್ರಾಮ್ಯಭ್ಭುಜ
ಪರಿಘರುಗ್ಣ ಗ್ರಹಗಣಂ |
ಮುಹುರ್ದ್ಯೌರ್ದೌಸ್ಥ್ಯಂ ಯಾತ್ಯ
ನಿಭೃತ ಜಟಾತಾಡಿತತಟಾ
ಜಗದ್ರಕ್ಷಾಯೈತ್ವಂ ನಟಸಿ ನನುವಾಮ್ಯೈವ
ವಿಭುತಾ ||

ಎನ್ನುವ ಮಹಿಮಾ ಸ್ತೋತ್ರದಲ್ಲಿ ಆದಿಪುರುಷನಾದ ಪರಮೇಶ್ವರನ ನಾಟ್ಯಲೀಲಾವಿಲಾಸವನ್ನು ಕುರಿತು ಬರೆಯಲ್ಪಟ್ಟ ಶ್ಲೋಕವು ಜಗದ್ರಕ್ಷಣೆಗೆ ನಾಟ್ಯವು ಅಗತ್ಯವೆಂಬ ಸಾಕ್ಷ್ಯವನ್ನು ಕೊಡುತ್ತದೆ. ಶಿವನು ನಟಿಸಿ ಜಗತ್ತನ್ನು ಉಜ್ಜೀವಿಸುತ್ತಾನೆ. ಅವನು ಚೈತನ್ಯ ಮೂರ್ತಿ. ಜಗತ್ತು ಜಡವಾದುದು. ತನ್ನ ನಾಟ್ಯದ ಮುಖಾಂತರ ಆತನು ಜಗತ್ತಿನಲ್ಲಿನ ಅಣುಪ್ರತ್ಯಣುಗಳನ್ನು ಉದ್ಬೋಧಿಸಿ ನಟಿಸುವಂತೆ ಮಾಡುತ್ತಾನೆ. ಆಗ ಜಗತ್ತು ಚೈತನ್ಯಮಯವಾಗಿ ನಟಿಸುತ್ತದೆ. ಆದರಲ್ಲಿ ಪ್ರಾಕೃತಿಕ, ಮಾನಸಿಕ ಶಕ್ತಿಗಳೆಲ್ಲವೂ ಗತಿಮಾನಗಳಾಗಿ ಅದೇ ವಿಧವಾದ ನಾಟ್ಯವನ್ನು ಆಡಿಸುತ್ತವೆ. ಇದೇ ಜಗನ್ನಾಟಕ ಲೀಲಾ ಸೂತ್ರಧಾರನಾದ ಆ ಪರಮಶಿವನ ನಾಟ್ಯಕ್ಕೆ ಪ್ರತಿಫಲ. ಇದೇ ಸೃಷ್ಟಿ, ಇದೇ ಸ್ಥಿತಿ, ಲಯ ಸಮಯದಲ್ಲೂ ಕೂಡ ಆತನು ನರ್ತಿಸುತ್ತಾನೆ. ಪುನಃ ನಟಿಸಿ ಸೃಷ್ಟಿ ಮಾಡುತ್ತಾನೆ. ನಾಟ್ಯವು ಆತನಿಗೆ ಲೀಲೆ. ಅದು ಆನಂದಮಯವಾದುದು. ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವರೂಪಗಳಲ್ಲಿ ಬೇರೆಯಾಗಿ ಆತನು ಮಾಡುವ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ, ಅನುಗ್ರಹಗಳೆಂಬ ಪಂಚವಿಧ ಕಾರ್ಯಗಳು ಆತನ ನರ್ತನದಲ್ಲಿ ಒಂದೇ ಬಾರಿ ಮೂರ್ತೀಭವಿಸುತ್ತವೆ. ಭಕ್ತರು ನಾಟ್ಯದಲ್ಲಿ ಪಂಚವಿಧ ಗತಿಗಳಿಗೆ ಪಂಚಾಕ್ಷರಿ ಮಂತ್ರಗಳೊಂದಿಗೆ ಸಮನ್ವಯ ಮಾಡಿ ಸ್ಮರಿಸಿ, ಧ್ಯಾನಿಸಿ, ಆನಂದ ನರ್ತಿತ ಹೃದಯಗಳಾಗುತ್ತಾರೆ. ಇದಕ್ಕಿಂತ ಬೇಕಾದುದು ಏನಿದೆ?

ಪರಮೇಶ್ವರನ ಈ ನಾಟ್ಯವನ್ನು ವರ್ಣಿಸಿರುವ ಸಾಹಿತ್ಯ ಸಂಪದ ನಮ್ಮಲ್ಲಿ ಬೇಕಾದಷ್ಟಿದೆ. ಆರ್ಯ ವಾಙ್ಮಯದಲ್ಲೇ ಅಲ್ಲದೆ ದ್ರಾವಿಡ ವಾಙ್ಮಯದಲ್ಲೂ ಕೂಡ ಈ ನಾಟ್ಯವು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಪ್ರಾಚೀನ ದ್ರಾವಿಡ ವಾಙ್ಮಯಕ್ಕೆ ಸೇರಿದ 'ಕಲಿತ್ತೊಗೈ' ನಲ್ಲಿ ಶಿವನ ನಾಟ್ಯದ ಮೂರು ವಿಧಗಳು ವರ್ಣಿಸಲ್ಪಟ್ಟಿವೆ.

1. ಕೊಡು ಕೊಟ್ಟಿ: ಇದು ಶಿವನ ವಿಲಯ ತಾಂಡವ. ಪ್ರಳಯ ಸಂಧ್ಯಾಕಾಲದಲ್ಲಿ ಆತನು ಈ ನಾಟ್ಯಕ್ಕೆ ಉಪಕ್ರಮಿಸಿದನಂತೆ, ನೋಡಿದವರಾರು? ಪ್ರಕೃತಿ ಸ್ವರೂಪಿಣಿ ಭವಾನಿ. ಆತನ ಅನುಗ್ರಹವಿಲ್ಲದೆ ಇದನ್ನು ದರ್ಶಿಸುವ ಭಾಗ್ಯ ಬೇರೊಬ್ಬರಿಗೆ ಹೇಗೆ ಲಭಿಸುತ್ತದೆ?

2 ಪಾಂಡರಂಗಂ: ತ್ರಿಪುರಾಸುರ ಸಂಹಾರದ ನಂತರ ವಿಜಯಾಹ್ಲಾದದಿಂದ ಶಿವನು ನಾಟ್ಯವಾಡಿ ಭವಾನಿಯನ್ನು ಮೆಚ್ಚಿಸಿದನಂತೆ'

3. ಕಪಾಲಿ: ಬ್ರಹ್ಮ ಶಿರೋತ್ಪಾಟನವನ್ನು ಮುಗಿಸಿ ಶಿವನು ಮಾಡಿದ ನಾಟ್ಯವಿದು. ಆದರೆ ಇದನ್ನು ಬೇರೊಬ್ಬರು ನೋಡಿದ್ದರೇ ಎಂದರೆ ಆತನ ಅನುಗ್ರಹಕ್ಕೆ ಪಾತ್ರರಾದವರೆಲ್ಲಾ ನೋಡಿರುವರು ಎಂಬುದೇ ಉತ್ತರ.

ಹಿಮಪರ್ವತ ಪ್ರಾಂತದಲ್ಲಿ ಒಂದು ದಿನ ಸಾಯಂಕಾಲದ ವೇಳೆಯಲ್ಲಿ ಸಮಸ್ತ ದೇವತೆಗಳ ಸನ್ನಿಧಾನದಲ್ಲಿ ಸಭೆನಾಡಿ ಮತ್ತೆ ಆತನು ನಟಿಸಿದನಂತೆ. ಪ್ರದೋಷ ಸ್ತೋತ್ರದಲ್ಲಿ ಈ ನಾಟ್ಯವನ್ನು ಈ ಕೆಳಕಂಡಂತೆ ವರ್ಣಿಸಿ ಕವಿಸಾರ್ಥಕತೆ ಹೊಂದಿರುವನು.

ಕೈಲಾಸ ಶೈಲ ಭುವನೇ
ತ್ರಿಜಗಜ್ಜನಿತ್ರೀಂ
ಗೌರೀಂ ನಿವೇಶ್ಯ ಕನಕಾಂಚಿತ ರತ್ನಪೀಠೇ
ನೃತ್ಯಂ ವಿಧಾತು ಮಭಿವಾಂಛತಿ
ಶೂಲಪಾಣೌ
ದೇವಾಃ ಪ್ರದೋಷ
ಸಮಯೇऽನುಭವಂತಿ ಸರ್ವೇ

ಜಗನ್ಮಾತೆಯಾದ ಪಾರ್ವತಿ ಸಿಂಹಾಸನಾಸೀನಳಾಗಿರುವಾಗ ಆಕೆಯನ್ನು ಮೆಚ್ಚಿಸಿ ಪರೀಕ್ಷೆಯಲ್ಲಿ ಗೆಲ್ಲಬೇಕೆಂದು ಪರಮಶಿವನಿಗೆ ನಾಟ್ಯವಾಡಬೇಕೆಂಬ ಸಂಕಲ್ಪವು ಉಂಟಾಯಿತಂತೆ. ಅದು ಪ್ರದೋಷ ಸಮಯ. ದೇವತೆಗಳೆಲ್ಲ ಸೇರಿ ಸೇವಿಸಲೆಂದು ಬಂದ ಸಮಯ, ಅವರ ಅದೃಷ್ಟವು ಹೆಚ್ಚಾಗಿ ಆತನ ನರ್ತನವನ್ನು ನೋಡುವ ಮಹದವಕಾಶವು ಅವರಿಗೆ ಲಭಿಸಿತು. ನೋಡಿ ಆನಂದಿಸಿದವರು ಕೆಲವರು, 'ಧನ್ಯಾವಯಂ' ಎಂದು ಹೇಳಿ ಕೊಂಡವರು. ಕೆಲವರು, ಯಥಾಶಕ್ತಿ ನಾಟ್ಯಕ್ಕೆ ಸಹಾಯ ಮಾಡಿದವರು ಕೆಲವರು.

ವಾಗ್ದೇವೀ ಧೃತವಲ್ಲಕೀ ಶತಮಖೋ
ವೇಣುಂ ದಧತ್ಪದ್ಮಜ
ಸ್ತಾಳೋನ್ನಿದ್ರಕರೋ ರಮಾ ಭಗವತೀ
ಗೇಯ ಪ್ರಯೋಗಾನ್ವಿತಾ
ವಿಷ್ಣುಃ ಸಾಂದ್ರ ಮೃದಂಗವಾದನ
ಪಟುರ್ದೇವಾಃ ಸಮಂತಾತ್ ಸ್ಥಿತಾಃ
ಸೇವಂತೇ ತಮನು ಪ್ರದೋಷಸಮಯೇ
ದೇವಂ ಮೃಡಾನೀಪತಿಂ

ಮೂಲ ;
**ಡಾ|| ಎಂ. ಸಂಗಮೇಶಂ**
ಅನುವಾದ ;
**ಶ್ರೀಮತಿ ಎಸ್. ವಿ. ಹೇಮಾವತಿ**

ಸರಸ್ವತಿ ವೀಣೆಯನ್ನು, ದೇವೇಂದ್ರನು ವೇಣುವನ್ನು, ಬ್ರಹ್ಮನು ತಾಳವನ್ನು ವಿಷ್ಣುವು ಮೃದಂಗವನ್ನು ಬಾರಿಸಿದರಂತೆ. ಲಕ್ಷ್ಮಿಯು ಹಾಡಿದಳಂತೆ. ಕಣ್ಣಿಗೆ ಹಬ್ಬವಾಗಿ, ಕೇಳುವವರ ಪುಣ್ಯವಾಗಿ ದೇವತೆಗಳು ಆ ನಾಟ್ಯರಸವನ್ನು ಆಸ್ವಾದಿಸಿದರಂತೆ. ದೇವತೆಗಳು ಮಾತ್ರವೇ ಈ ದಿವ್ಯದೃಶ್ಯವನ್ನು ನೋಡಿದರೇನು ? ಇಲ್ಲ.

ಗಂಧರ್ವ ಯಕ್ಷ ಪತಗೋರಗ ಸಿದ್ಧ ಸಾಧ್ಯ
ವಿದ್ಯಾಧರಾಮರ ವರಾಪ್ಸರಸಾಂ ಗಣಾಶ್ಚ
ಯೇನ್ಯೇತ್ರಿಲೋಕ ನಿಲಯಾಃ ಸಹ ಭೂತವರ್ಗಾಃ
ಪ್ರಾಪ್ತೇ ಪ್ರದೋಷಸಮಯೇ ಹರ ಪಾರ್ಶ್ವ ಸಂಸ್ಥಾಃ

ಇದಕ್ಕೇನು ಸುಂಕ ಇಲ್ಲ. ಪರಮೇಶ್ವರಾನುಗ್ರಹವೊಂದೇ ಬೇಕಾಗಿರುವುದು. ಅದು ಲಭಿಸಿತ್ತು. ಎಲ್ಲರೂ ಗುಂಪುಗೂಡಿ ಎರಡು ಪಾರ್ಶ್ವಗಳಲ್ಲೂ ನಿಂತು ನೋಡಿ ಆನಂದಿಸಿದರು. ಮೂರು ಲೋಕದವರೂ ನೋಡಿ ಪರವಶಿಸಿ ಮೆಚ್ಚುಗೆಯಿಂದ ಹೇಳಿಕೊಂಡ ನಾಟ್ಯವಿದು.

ಶಿವನೊಬ್ಬನೇ ಅಲ್ಲ ಭವಾನಿ ಕೂಡ ನಾಟ್ಯಕ್ಕೆ ಹೆಸರಾದವಳು. ಆದಿದಂಪತಿಗಳಾದ ಇವರು ಒಮ್ಮೆ ಆನಂದದಿಂದ ನರ್ತಿಸುತ್ತಾರೆ. ಮತ್ತೊಮ್ಮೆ ತಾಮಸದಿಂದ ನರ್ತಿಸುತ್ತಾರೆ. ವೀರ ಭದ್ರಾವತಾರದಲ್ಲಿ ಶಿವನು ಕೋಪಿಸಿ ಸ್ಮಶಾನದಲ್ಲಿ ನಿಂತು ದೇವೀ ಸಹಾಯಕನಾಗಿ ಭೂತಗಣ ಪರಿವೇಷ್ಟಿತನಾಗಿ ನರ್ತಿಸಿದಂತೆ ಶೈವಾಗಮಗಳು ಹೇಳಿಕೊಂಡಿವೆ. ಆ ಸಮಯದಲ್ಲಿ ಶಿವನು ಹತ್ತು ಕೈಗಳನ್ನು ಧರಿಸಿ ತಾಂಡವಿಸಿದನಂತೆ ದೇವಿಯೂ ಕೂಡ ಅದಕ್ಕೆ ತಕ್ಕಂತೆಯೇ ನರ್ತಿಸಿದಂತೆ ಶಾಕ್ತ್ಯಾಗಮಗಳು ಸಾಕ್ಷ್ಯ ಕೊಡುತ್ತವೆ. ಪ್ರಕೃತಿ ಪುರುಷರಿಬ್ಬರಿಗೆ ಪ್ರಿಯವಾದ ಈ ನರ್ತನವು ಬಹು ಪ್ರಾಚೀನವಾದುದು. ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿಯೇ ಎಷ್ಟೋ ಸಾವಿರ ವರ್ಷಗಳಿಂದ ಈ ದೇಶದಲ್ಲಿ ವ್ಯಾಪಿಸಿದ ನಂಬಿಕೆಗಳಲ್ಲಿ ಒಂದು ಶಿವಭಕ್ತಿ, ಲಿಂಗಾರ್ಚನೆ ಎನ್ನುವುವು. ಈ ದೇಶದಲ್ಲಿ ಮೊಹೆಂಜದಾರೋ ನಾಗರಿಕತೆಯ ಕಾಲಕ್ಕೇ ಆಚರಣೆಯಲ್ಲಿದ್ದ ಧಾರ್ಮಿಕ ಸಂಪ್ರದಾಯಗಳು. ನಟರಾಜನಾದ ಶಿವನು ಅಂದಿಗೇ ಅರ್ಧಪುರುಷ ಅರ್ಧಸ್ತ್ರೀ. ಕೈಲಾಸವಾಸಿಯಾಗಿ ಆತ ದೇವರು, ಸ್ಮಶಾನವಾಸಿಯಾಗಿ ಭೂತ. ಒಂದೊಮ್ಮೆ ತನ್ನ ಭಕ್ತರಾದ ಪ್ರಾಚೀನ ಆರ್ಯೇತರರು ದಕ್ಷಿಣ ದೇಶಕ್ಕೆ ಬಂದಾಗ ಭಕ್ತಾನುರಕ್ತನಾದ ಪರಮಶಿವನೂ ಸಹ ಅವರೊಂದಿಗೆ ದಕ್ಷಿಣಕ್ಕೆ ಪ್ರಾಯಶಃ ಬಂದಿರಬಹುದು. ಚಿದಂಬರದಲ್ಲಿ ಆತನು ಮೊದಲು ನಟಿಸಿದ. ನಂತರ ಅಲ್ಲೇ ನಿಲಯ ಮಾಡಿಕೊಂಡನೆಂದು ಪ್ರಾಚೀನ ದ್ರಾವಿಡ ವಾಙ್ಮಯದಲ್ಲಿ ನಿದರ್ಶನಗಳಿವೆ

ಚಿದಂಬರಕ್ಕೆ ತಮಿಳು ಭಾಷೆಯಲ್ಲಿ 'ತಿಲ್ಲೈ' ಎಂದು ಹೆಸರು ಅದು ಪ್ರಪಂಚಕ್ಕೆ ಕೇಂದ್ರ ಬಿಂದುವಂತೆ. ಆದ್ದರಿಂದಲೇ ಶಿವನು ಅಲ್ಲಿ ನರ್ತಿಸಿ ಜಗತ್ತನ್ನು ಉದ್ಧರಿಸಿ, ನಟರಾಜ ಮೂರ್ತಿಯಾಗಿ ನಿಂತು ಪಾಲಿಸಲು ನೆಲೆಸಿದನು. ಇಲ್ಲಿರುವ ಸುವರ್ಣಮಂಟಪದಲ್ಲಿ ಆತನು ನರ್ತನ ಮಾಡಿದ್ದೆಲ್ಲಾ 'ನಾಟ್ಯ'ವಂತೆ. ಇದಕ್ಕೆ ಸಂಬಂಧಿಸಿದಂತೆ ಪೂರ್ವ ಕಥೆಯೂ ಕೂಡ ಕೇಳತಕ್ಕದ್ದೇ. ತಿಲ್ಲೈ ಸಮೀಪದಲ್ಲಿ 'ತರಗಾಂ' ಎನ್ನುವ ಕಾಡು ಇದ್ದಿತು. ಅಲ್ಲಿಗೊಂದು ಸಾರಿ ಕೆಲವು ಮುನಿ



**ಕುಮಾರಿ ಸೀತಾ ಅವರ ಕೂಚಿಪೂಡಿ ನೃತ್ಯದೊಂದು ಭಂಗಿ.**

ಗಳು ಸೇರಿ ಮೀಮಾಂಸಾ ಚರ್ಚೆಗಳಲ್ಲಿ ಮುಳುಗಿ ತೇಲುತ್ತಿರುವಾಗ ಶಿವನು ವಿಷ್ಣು ದ್ವಿತೀಯನಾಗಿ ಆ ಪರಿಸರದ ಪ್ರಾಂತಗಳಲ್ಲಿ ವಿಹರಿಸಲು ಬಂದನು. ವಿಷ್ಣುವು ಪುರುಷಾಕೃತಿ ಬಿಟ್ಟು ಜಗನ್ಮೋಹಿನೀ ರೂಪದಲ್ಲಿ ಶಿವನು ಹಿಂದ ನಡೆದನು. ಆದಿಶೇಷನು ಈ ಇಬ್ಬರನ್ನು ಅನುಸರಿಸಿದನು. ಇವರ ಆಕಾರ ವಿಕಾರಗಳಾಗಲೀ ಚೇಷ್ಟೆ ಸ್ವಭಾವಗಳಾಗಲೀ ಮುನಿಗಳಿಗೆ ಇಷ್ಟವಾಗಲಿಲ್ಲ. ತಮ್ಮ ಅನುಷ್ಠಾನಗಳಿಗೆ ಇದು ತೊಂದರೆಯೆಂದು ಅವರು ಭಾವಿಸಿದರು. ಒಂದು ಹುಲಿಯನ್ನು ಸೃಜಿಸಿ ಇವರ ಮೇಲೆ ಬಿಟ್ಟರು. ಆದರೆ ಶಿವನು ಅದನ್ನು ಸಂಹರಿಸಿ ಅದರ ಚರ್ಮವನ್ನು ಧರಿಸಿದಾಗ ಸರ್ಪವೊಂದನ್ನು ಸೃಷ್ಟಿ ಮಾಡಿ ಬಿಡುತ್ತಾರೆ. ಶಿವನು ಅದನ್ನು ಆಭರಣವಾಗಿ ಧರಿಸುತ್ತಾನೆ. ಮುನಿಗಳು ಮೂಯಾಳುಕ ಎಂಬ ರಾಕ್ಷಸನನ್ನು ಸೃಷ್ಟಿಸಿ ಹುರಿದುಂಬಿಸುವರು. ಶಿವನು ಆ ರಾಕ್ಷಸನನ್ನು ತನ್ನ ಕಾಲಿನ ಕೆಳಕ್ಕೆ ಹಾಕಿ ತಾಂಡವಿಸುತ್ತಾನೆ. ಮುನಿಗಳು ಜೋಹಾರು ಮಾಡುವರು. ಮೂಯಾಳುಕನು ಮುಕ್ತಿ ಹೊಂದುತ್ತಾನೆ. ಆದಿಶೇಷನು ನಾಟ್ಯವನ್ನು ನೋಡಿ ಪರವಶನಾಗಿ ಮತ್ತೊಮ್ಮೆ ನಟಿಸಬೇಕೆಂದು ಪ್ರಾರ್ಥಿಸುವನು. ಶಿವನು ಈಗ ಸಮಯವಲ್ಲವೆಂದು, ಈ ಸಾರಿ ತಿಲ್ಲೈನಲ್ಲಿ ಪುನಃ ನರ್ತಿಸುತ್ತೇನೆಂದು ಹೇಳಿ ಅಂತರ್ಧಾನನಾಗುವನು. ಶೇಷನು ತಿಲ್ಲೈಯನ್ನು ಸೇರಿ ನರನಾಗವೇಷದಿಂದ ನಟರಾಜಶೇಖರನ ಆಗಮನವನ್ನು ನಿರೀಕ್ಷಿಸುತ್ತ ಸಾವಿರ ವರುಷ ತಪಸ್ಸು ಮಾಡುವನು. ಶಿವನು ಕರುಣಿಸಿ ಸಾಕ್ಷಾತ್ಕರಿಸಿ ಶೇಷನ ಪ್ರೀತಿಗಾಗಿ ನರ್ತನ ಮಾಡುತ್ತಾನೆ. ಆತನ ಕೋರಿಕೆಯಂತೆ ಶಾಶ್ವತವಾಗಿ ಅಲ್ಲಿ ಅದೇ ನಟರಾಜ ಮೂರ್ತಿಯಲ್ಲಿ ನೆಲೆಸುತ್ತಾನೆ.

ಈ ನಟರಾಜ ಮೂರ್ತಿಯನ್ನು, ಈ ಭಂಗಿಯನ್ನು, ಇದರ ಮಹಾತ್ಮೆಯನ್ನು ಅನೇಕ ವಿಧಗಳಲ್ಲಿ ವರ್ಣಿಸುತ್ತಾರೆ. ಎಷ್ಟೋ ಶಿಲ್ಪಿಗಳು ಈ ನಟರಾಜ ವಿಗ್ರಹಗಳನ್ನು ನಿರ್ಮಿಸಿ ತಮ್ಮ ಕಲಾಪ್ರಾವೀಣ್ಯವನ್ನು ಚರಿತಾರ್ಥಗೊಳಿಸಿಕೊಂಡಿರುವರು. ಈ ವಿಗ್ರಹಗಳೆಲ್ಲದರಲ್ಲೂ ಶಿವನ ಬಲ ಕಿವಿಗೆ ಪುರುಷೋಚಿತವಾದ ಕುಂಡಲ, ಎಡಕಿವಿಗೆ ಸ್ತ್ರೀಗೆಉಚಿತವಾದ ಕರ್ಣಾಭರಣ ಕಾಣಬರುತ್ತದೆ. ಶಿವನಿಗೆ ನಾಲ್ಕು ಕೈಗಳಿದ್ದು, ಬಲಗೈಯ್ಯಲ್ಲಿ ಡಮರುಕ, ಎಡಗೈಯಲ್ಲಿ ಹಾಲಾಹಲಜ್ವಾಲೆಯನ್ನು ಧರಿಸಿ ಪದ್ಮ ಪೀಠದ ಮೆಲೆ ಬಲಗಾಲನ್ನು ಮಡಿಸಿ ಮೂಯಾಳುಕನ ತಲೆಯನ್ನು ತುಳಿಯುತ್ತಾ ನರ್ತಿಸುತ್ತಿರುವಂತೆ ಈ ವಿಗ್ರಹಗಳು ನಿರ್ಮಿತವಾಗಿವೆ. ಮಿಕ್ಕ ಎರಡು ಕೈಗಳಲ್ಲಿ ಬಲಗೈ ಅಭಯ ಮುದ್ರಾಂಕಿತವಾಗಿಯೂ, ಎಡಗೈಯು ಸ್ವಲ್ಪ ಪಾರ್ಶ್ವಕ್ಕೆ ಚಾಚಿದ ಹಾಗೆ ಅಂಗೈಯಿಂದ ಮೇಲಕ್ಕೆತ್ತಿದ ಎಡಗಾಲು ಪಾದವನ್ನು ತೋರಿಸುತ್ತಿರುತ್ತದೆ. ಪದ್ಮಪೀಠದಿಂದ ಶಿವಮೂರ್ತಿಯನ್ನ ಪರಿಭ್ರಮಿಸಿ ಬಂದಂತೆ 'ತಿರುವಾಸಿ' ಎಂಬ ಅಗ್ನಿ ತೋರಣವೊಂದು ಕಲ್ಪಿಸಲ್ಪಟ್ಟಿರುತ್ತದೆ ಶಿವನು ನಾಗಭೂಷಣನಾಗಿ, ಚರ್ಮಹೊದ್ದು, ಜಟೆಗಳನ್ನು ನೀಳವಾಗಿ ಹರಡಿಕೊಂಡು ಗಂಗಾ ಚಂದ್ರ ಕಲಾಧರನಾಗಿ ನರ್ತಿಸುತ್ತಿರುವಂತೆ ಚಿತ್ರಿಸಲ್ಪಟ್ಟಿರುವನು. ಇದೆಲ್ಲಾ ಒಂದು ಸಂಪ್ರದಾಯ. ಎಲ್ಲಾ ರಹಸ್ಯಾರ್ಥಮಯ. ಇದು ಲಯತಾಂಡವ ಸಂಹಾರ ನೃತ್ಯ. ಆತನು ಸಂಹರಿಸುವುದು ಜಗತ್ತನ್ನೇ ಅಲ್ಲ; ಜೀವಿಯ ಭವಪಾಶವನ್ನು ಕೂಡ. ಆತನು ನಟಿಸುವುದು 'ಪದ್ಮಕೋಶಪ್ರತೀಕಾಶ'ವಾದ ಭಕ್ತರ ಹೃದಯಗಳಲ್ಲೇ. ಕಾಮಕ್ರೋಧಾದಿ ಅರಿಷಡ್ವರ್ಗದಿಂದ ದಹ್ಯಮಾನವಾದ ಮಾನವ ಹೃದಯವೇ ಶಿವ ತಾಂಡವ ಸ್ಥಳವಾದ ಸ್ಮಶಾನ.

ಅಂತಶ್ಚರತಿ ಭೂತೇಷು ಗುಹಾಯಾಂ
ವಿಶ್ವಮೂರ್ತಿಷು
ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವ
ಮಿಂದ್ರಸ್ತ್ವಂ
ರುದ್ರಸ್ತ್ವಂ ವಿಷ್ಣುಸ್ತ್ವಂ ಬ್ರಹ್ಮ
ತ್ವಂಪ್ರಜಾಪತಿಃ

ಎನ್ನುವ ವೇದವಾಕ್ಯವು ಈ ನಟರಾಜ ವಿಗ್ರಹಗಳಲ್ಲಿ ಮೂರ್ತೀಭವಿಸುತ್ತದೆ. ಬಲಗೈಯ ಢಕ್ಕೆಯ ಬಾಯಿಂದ ಸೃಷ್ಟಿ, ಅಭಯಮುದ್ರಾಂಕಿತವಾದ ಹಸ್ತಗಳಿಂದ ಸ್ಥಿತಿ, ಎಡಗೈಯ ಜ್ವಾಲಾಪುಂಜದಿಂದ ಸಂಹಾರ,ಮೇಲೆತ್ತಿದ ಎಡಪಾದದಿಂದ ಮುಕ್ತಿ, ನೆಲದ ಮೇಲಿರುವ ಬಲಪಾದದಿಂದ ಜೀವಿಗಳಿಗೆ ಶರಣವನ್ನು ಪ್ರಸಾದಿಸಿ ಬ್ರಹ್ಮಾದಿರೂಪಗಳಿಂದ ತಾನು ಮಾಡುವ ಸಮಸ್ತ ಕ್ರಿಯಾಕಲಾಪಗಳನ್ನು ಒಮ್ಮೆಗೇ ಈ ನಾಟ್ಯದಲ್ಲಿ ಪ್ರದರ್ಶಿಸಿ 'ಏಕಮೇವಾದ್ವಿತೀಯಂ' ಎನ್ನುವ ನಿಜತತ್ವವನ್ನು ಶಿವನು ಪ್ರಕಟಿಸುತ್ತಿರುವನೆಂದು ಈ ವಿಗ್ರಹಗಳಿಂದ ತಿಳಿದುಬರುವ ಭಾವಸಂಪದ. 'ತಿರುವಾಸಿ'ಯೇ ಓಂಕಾರ. ಮೇಲಿನ ಪಂಚಮುದ್ರೆಗಳೇ 'ನಮಃಶಿವಾಯ' ಎನ್ನುವ ಪಂಚಾಕ್ಷರಿ ಬೀಜಗಳು.

ಈ ವಿಧವಾಗಿ ಸಮಸ್ತ ವೈದಿಕ ತಾಂತ್ರಿಕ ಸಿದ್ಧಾಂತಗಳನ್ನು ಜೋಡಿಸಿ ಸಾರಭೂತವಾಗಿ ನಿರ್ಮಿಸಿದ ನಟರಾಜ ವಿಗ್ರಹಗಳಿಗೆ ಆಧಾರ, ಶಿವನು, ಇದೇ ಭಂಗಿಯಲ್ಲಿ ಚಿದಂಬರದ ಕನಕ ಸಭೆಯಲ್ಲಿ ನರ್ತಿಸಿದನೆಂದೇ ನಂಬಿಕೆ. ಇಂತಹ ನಂಬಿಕೆಯೇ ಶಾಕ್ತೇಯರಲ್ಲಿ ಪ್ರಬಲವಾಗಿ ಕಾಳಿಕಾ ವಿಗ್ರಹಗಳ ಸೃಷ್ಟಿಗೆ ಆಧಾರ ನೀಡಿದೆ. ಪ್ರಕೃತಿ ಪುರುಷರ ಅಭೇದವನ್ನು ಒಪ್ಪಿಕೊಳ್ಳುವ ಭಕ್ತ ಹೃದಯಗಳಲ್ಲಿನ ಭಾವವೇ ನಟರಾಜನನ್ನು ಅರ್ಧನಾರೀಶ್ವರನಂತೆ ಚಿತ್ರಿಸಿ ಸಂತಸಪಟ್ಟಿದೆ. ವಿಭೇದವೇ ಸೃಷ್ಟಿಗೆ ಮೂಲವೆನ್ನುವ ನಂಬಿಕೆಯೇ ಈ ಇಬ್ಬರನ್ನು ಬೇರ್ಪಡಿಸಿ ಪ್ರತ್‌ಪ್ರತ್ಯೇಕವಾಗಿ ಚಿತ್ರಿಸಿ ವ್ಯಾವರ್ಣಿತವಾಗಿದೆ. ಚಿದಂಬರದ ದೇವಾಲಯದ ಶಿಲ್ಪಗಳಲ್ಲಿ ಪಾರ್ವತಿ ಪರಮೇಶ್ವರ ಎಷ್ಟೋ ನಾಟ್ಯ ಭಂಗಿಗಳು ನಿರ್ಮಿಸಲ್ಪಟ್ಟಿವೆ. ಒಂದು ಸಾರಿ ಇವರಿಬ್ಬರೂ ಪಂಥ ಹೂಡಿ ನರ್ತಿಸಿದರಂತೆ. ಆ ನರ್ತನದ ಆದ್ಯಂತವೂ ಈ ಶಿಲಾಪ್ರತಿಮೆಗಳಲ್ಲಿ ಲಿಖಿತವಾಗಿವೆ. ನಾಟ್ಯಕಲೆಯ ಅಭ್ಯಾಸಕ್ಕೆ ಇದು ಎಷ್ಟು ಸಹಕಾರ. ಭಂಗಿಗಳ ಬಿಚ್ಚಿ ತಿಳಿಸುವ, ವ್ಯಾಖ್ಯಾನಿಸುವ ನಾಟ್ಯಾಚಾರ್ಯರಿಗೆ ಎಷ್ಟೊಂದುನೆರವು ಆ ನಾಟ್ಯದ ಕಥೆಯು ಹೀಗಿದೆ. ಚಿದಂಬರದಲ್ಲಿ ನಟಿಸಿದ ಶಿವ ಅಲ್ಲಿಯೇ ಸ್ಥಿರನಿವಾಸವನ್ನು ನಿರ್ಮಿಸಿಕೊಳ್ಳಲು ಯೋಚಿಸಿದನಂತೆ. ಆದರೆ ಅದು, ಮೊದಲೇ ಕಾಳಿಕಾದೇವಿಗೆ ನಿವಾಸ ಭೂಮಿಯಾದ್ದರಿಂದ ಸ್ಥಳಾಧಿಪತ್ಯಯ ವಿಷಯದಲ್ಲಿ

ಅವರೀರ್ವರಲ್ಲಿ ವಿವಾದ ಉಂಟಾಯಿತಂತೆ. ವಿವಾದ ಉಂಟಾದರೂ ರಸಿಕರಾದ್ದರಿಂದ ನಾಟ್ಯದಲ್ಲಿ ತಮಗಿರುವ ಆಧಿಕ್ಯವನ್ನು ಅನುಸರಿಸಿ ಆಧಿಪತ್ಯ ವಿಷಯವನ್ನು ನಿರ್ಣಯಿಸಿ ಕೊಳ್ಳಲು ತೀರ್ಮಾನಿಸಿದರಂತೆ. ಸಭೆಯನ್ನು ಸೇರಿಸಿ ನಾಟ್ಯಕ್ಕೆ ಉಪಕ್ರಮಿಸಿ ಪರಸ್ಪರ ಜಯೋತ್ಸಾಹಗಳಿಂದ ತಾಂಡವಿಸಿದರಂತೆ. ಸ್ತ್ರೀ ಸಹಜವಲ್ಲದ ಹಲವು ನಾಟ್ಯ ಭಂಗಿಗಳನ್ನು ಪರಶಿವನು ತೋರಿಸಿದನಂತೆ. ಈ ಅನ್ಯಾಯವನ್ನು ಅಂಬಿಕೆ ಅಲ್ಲಗಳೆಯಲಿಲ್ಲ. ಹಾಗೆಂದು ಹದ್ದುಮೀರಿ ಲಜ್ಜಾಸ್ಪದವಾದ ಆ ಭಂಗಿಗಳನ್ನು ತೋರಿಸಲಿಲ್ಲ. ಅಪಜಯವನ್ನು ಅಂಗೀಕರಿಸಿ ಸ್ಥಳವನ್ನು ಬಿಟ್ಟು ಹೋಗಿ ಶಿವನ ಅಧಿಪತ್ಯವನ್ನು ಸ್ಥಿರಗೊಳಿಸಿದಳಂತೆ. ಈ ಕಥೆಯನ್ನು ಅನುಸರಿಸಿ ಮಾಡಿದ ಕಲಾ ಸೃಷ್ಟಿ ಕಣ್ಣಿಗೆ ಚೇತೋಹಾರಿಯಾಗಿ ನಮಗೆ ಇಂದಿಗೆ ದೊರಕಿದೆ- ಸುಮಾರು ನೂರೆಂಟು ಕರಣ ಶಿಲ್ಪಗಳನ್ನು ಅಲ್ಲಿ ನೋಡಬಹುದು.

ಇದೆಲ್ಲಾ ನಮ್ಮ ಆಸ್ತಿಕತೆ. ಯಾವುದು ಹೇಗಾದರೂ ಇರಲಿ. ಈ ಆಸ್ತಿಕ್ಯ ಭಾವ ನಮ್ಮಲ್ಲಿರುವವರೆಗೆ ನಮಗೆ ಎಂತಹ ಕೊರತೆಯೂ ಇರದು. ಇದು ನಮ್ಮ ಜೀವನಕ್ಕೆ ಪ್ರಗತಿಯನ್ನು ತಂದುಕೊಟ್ಟು ನಿಸ್ಪೃಹೆಯನ್ನು ತೊಲಗಿಸಿ ಗುರಿಯನ್ನು ನಿರ್ಣಯಿಸಿ ನಡೆಸುತ್ತದೆ. ಪರಮೇಶ್ವರನು ರಸ ಸ್ವರೂಪಿ. ಆತನ ಲೀಲೆಯೇ ರಸಮಯ. ಅದನ್ನು ನಂಬಿದವರ ಹೃದಯ ರಸಾರ್ದ್ರ- ಹೃದ್ಗತ ಭಾವನೆಗಳು ರಸಪೂರ್ಣ ಸಾಕಾರ ಭಾವನೆಗಳಾದ ಕಲೆಗಳು ಕೂಡ ಅದೇ ರಸಸ್ರೋತಕ್ಕೆ ನಿಲಯಗಳಾಗಿ ನಿಲ್ಲುತ್ತವೆ. ಕಲಾಪರಿಚಯಕ್ಕೆ ಫಲ ರಸಾನುಭೂತಿ. ರಸಾನುಭೂತಿಗೆ ಇನ್ನೊಂದು ಹೆಸರು ಆನಂದಾನುಭೂತಿ. ಇವೆಲ್ಲಕ್ಕು ಮೂಲ ಮೊದಲೇ ಹೇಳಿದ ಆಸ್ತಿಕ್ಯ ಭಾವ. ಆಸ್ತಿಕತೆ ಇಲ್ಲದುದು ಆನಂದವಿಲ್ಲ, ಕಲೆಯಿಲ್ಲ, ಕಾಂತಿಯಿಲ್ಲ.



(1೬ನೇ ಪುಟ ದಿಂದ)

ಭವಗಳು ಕೇಂದ್ರೀಕರಿಸಿ–ನಂಬಿಕೆಯಾಗಿ ಕೆನೆಗಟ್ಟಿ ಪ್ರಚಾರದಲ್ಲಿದೆ. ಇವುಗಳನ್ನು ಒಂದೇ ಸಮನೆ ಪ್ರಚಾರದಿಂದ ಕಿತ್ತು ಹಾಕುವುದು ಸಾಧ್ಯವಾಗದು ಹಾಗಾಗಿ ಜನರಿಗೆ ತಿಳಿವು ನೀಡುವುದು–ವಿದ್ಯಾವಂತರಾದವರ ವಿಚಾರವಂತಿಗಳಾದವರ ಕರ್ತವ್ಯ

ಮನಸ್ಸಿಗೆ ಅನ್ನಿಸಿದ್ದೆಲ್ಲ ಸತ್ಯವಾಗದು. ಅದು ಬುದ್ಧಿಯ ಒರೆಗಲ್ಲಿನಲ್ಲಿ ತಿಕ್ಕಿಸಿಕೊಂಡು–ನಮಗೆ ಸರಿಕಾಣುವುದಾದರೆ ಅದನ್ನು ಚಿತ್ತಭಿತ್ತಿಯಲ್ಲಿ ನೆಲೆಗೊಳಿಸಿ ಆಚರಣೆಗೆ ತರಬಹುದು.

ಅರಬ್ ದೇಶಗಳಲ್ಲಿ ನೀರಿನ ಅಭಾವ. ಹಾಗಾಗಿ ಅಲ್ಲಿ ಸ್ನಾನಕ್ಕೆ ಮಿತಿ ಹಾಕಿದರು. ಹಾಗೆಂದು ನಮ್ಮಲ್ಲಿ ನೀರು ಧಾರಾಳ ಸಿಗುವಾಗಲೂ ಸ್ನಾನಕ್ಕೆ ಮಿತಿಹಾಕಬೇಕಿಲ್ಲ. ಹರಿದ್ವಾರದಲ್ಲಿನ ಪೂಜಾರಿ ಕೋಟು ಟೋಪಿ ಧರಿಸಿಕೊಂಡೇ ದೇವರಿಗೆ ಪೂಜೆ ಸಲ್ಲಿಸುತ್ತಾನೆ. ಕೇರಳದ ಪೂಜಾರಿ ಒದ್ದೆ ಪಂಚೆಯಲ್ಲೇ ದೇವರಿಗೆ ಪೂಜೆ ಸಲ್ಲಿಸುತ್ತಾನೆ. ಅದನ್ನು ದೇಶಾಚಾರವನ್ನಬೇಕು. ಬಯಲುಸೀಮೆಯಲ್ಲಿ ಕಜ್ಜಾಯ, ಪಾಯಸ, ಒಬ್ಬಟ್ಟು ಮೊದಲು ಬಡಿಸುತ್ತಾರೆ. ಆಮೇಲೆ ಅನ್ನ ಸಾರು. ಘಟ್ಟದ ಕೆಳಗೆ ಸಿಹಿಪದಾರ್ಥ ಕೊನೆಗೆ ಬರುತ್ತದೆ. ಆದೂ ದೇಶಾಚಾರ. ಇವುಗಳನ್ನೆಲ್ಲ ಇಂದಿನ ಜನಾಂಗ ಅರ್ಥಮಾಡಿಕೊಳ್ಳಬಲ್ಲದು.

ಯಾವುದೇ ಒಂದು ಸಂಗತಿ ನಮಗೆ ಗೊತ್ತಿಲ್ಲವೆಂದಮಾತ್ರಕ್ಕೆ ಅದು ಮೂಢನಂಬಿಕೆಯೆಂದು–ಕಂದಾಚಾರವೆಂದು ತೆಗೆದುಹಾಕುವಂತಿಲ್ಲ. ಯಾವನೂ ಸರ್ವಜ್ಞನಲ್ಲ. ನಾವು ಬುದ್ಧಿವಂತರು ಎಂದು ನಮಗೆ ನಾವೇ ಅಹಂಕಾರಪಟ್ಟರೂ ನಮಗೆ ತಿಳಿಯಾದ ಎಷ್ಟೋ ಸಂಗತಿಗಳು ಇವೆ. ಹಾಗಾಗಿ ನಾವು "ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಮಾಳ್ಪವರಿಂದ ನೋಡಿ, ಕೆಲವಂ ಶಾಸ್ತ್ರಂಗಳಂ ಓದುತಂ, ಕೆಲವಂ ಸುಜ್ಞಾನದಿಂದ ನೋಡುತಂ" ನಮ್ಮ ಜ್ಞಾನದ ಪರಿಧಿಯನ್ನು ಹೆಚ್ಚಿಸಿಕೊಳ್ಳಬೇಕು.

ನನ್ನ ಈ ಪುಟ್ಟ ಪ್ರಯತ್ನದಲ್ಲಿ ನಮ್ಮ ಎಲ್ಲ, ನಂಬಿಕೆಗಳಿಗೂ ಅರ್ಥನೀಡುವ ಪ್ರಯತ್ನ ಮಾಡಲಿಲ್ಲ. ಸಾಮಾನ್ಯವಾದ ಕೆಲವನ್ನು ಮಾತ್ರ ವಿವರಿಸಿದ್ದೇನೆ. ನನ್ನ ವಿವರಣೆ ಸರಿ ಎಂಬ ವಾದವೂ ನನ್ನದಲ್ಲ. ನನಗೆ ಅನ್ನಿಸಿದ ಮಟ್ಟಿಗೆ ಸರಿ ಕಾಣಿಸುತ್ತದೆ. ತಪ್ಪಾಗಿ ಕಾಣಿಸಿದುದನ್ನೂ ಹೇಳಿದ್ದೇನೆ. ನಾನು ಮುಟ್ಟದೆ ಇರುವುವು ಇನ್ನೂ ಹಲವು ಇವೆ.

---

## ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ನಾರಾಯಣವನಂ

(ಪುತ್ತೂರಿನ ಸಮೀಪದಲ್ಲಿ ತಿರುಪತಿ–ಮದರಾಸು ರಸ್ತೆಯಲ್ಲಿರುವ ಪುಣ್ಯಕ್ಷೇತ್ರ. ಶ್ರೀನಿವಾಸನು ಪದ್ಮಾವತಿಯನ್ನು ಮದುವೆಯಾದ ಕ್ಷೇತ್ರ. ಸುಂದರ, ಪ್ರಶಾಂತ ಪ್ರಕೃತಿಯಿಂದ ಕೂಡಿದ ಸ್ಥಳ.)

### ಆಲಯ ಕಾರ್ಯಕ್ರಮಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 6–00 | ಪ್ರಾ 6–30 |
| ವಿಶ್ವರೂಪ ಸರ್ವದರ್ಶನ | ಪ್ರಾ 6–30 | ಪ್ರಾ 8–30 |
| ತೋಮಾಲಸೇವೆ | ಪ್ರಾ 8–30 | ಪ್ರಾ 9–00 |
| ಕೊಲುವು | ಪ್ರಾ 9–00 | ಪ್ರಾ 9–30 |
| ಮೊದಲ ಗಂಟೆ | ಪ್ರಾ 9–30 | ಪ್ರಾ 10–00 |
| ಸರ್ವದರ್ಶನ | ಪ್ರಾ 10–00 | ಪ್ರಾ 11–30 |
| ಎರಡನೇಗಂಟೆ | ಪ್ರಾ 11–00 | ಮ 12–00 |
| ಬಿಡುವು | ಮ 12–00 | ಮ 4–00 |
| ಸರ್ವದರ್ಶನ | ಮ 4–00 | ಸಂ 6–30 |
| ತೋಮಾಲಸೇವೆ | ಸಂ 6–00 | ಸಂ 6–30 |
| ರಾತ್ರಿ ಗಂಟೆ | ಸಂ 6–00 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 9–00 | |

### ಆರ್ಜಿತ ಸೇವಾ ವಿವರಗಳು

| | |
|---|---|
| ಸಹಸ್ರನಾಮಾರ್ಚನೆ | ರೂ 5–00 |
| ಪುಲಿಕಾಪುಸೇವೆ | ರೂ 1–00 |
| ಅಭಿಷೇಕಾನಂತರ ದರ್ಶನ | ರೂ 1–00 |
| ಅರ್ಚನೆ | ರೂ 2–00 |
| ಆರತಿ | ರೂ 1–00 |
| ತೆಂಗಿನಕಾಯಿ ವರ್ತನೆ | ರೂ 0–50 |
| ಆರ್ಜಿತ ಕಲ್ಯಾಣೋತ್ಸವ | ರೂ 150–00 |

# ಸುಂದರ ಪ್ರಸಂಗ

ಸೀತಾನ್ವೇಷಣ: ಲೇ। ಆರ್. ಎಚ್. ಕುಲಕರ್ಣಿ; ಪ್ರಕಾಶಕರು; ಸಾಹಿತ್ಯಸದನ, ಎಂ.ಎಸ್.ಕೆ.ಮಿಲ್. ರೋಡ್, ಗುಲ್ಬರ್ಗಾ-585102, ಬೆಲೆ 1 ರೂಪಾಯಿ ಪುಟ:14.

ರಾಮಾಯಣದಲ್ಲಿ ಸುಂದರ ಕಾಂಡವು ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಈ ಒಂದು ಕಾಂಡದಲ್ಲಿ ಹನುಮಂತನು ರಾಮನ ಆಜ್ಞೆಯಂತೆ ಸೀತೆಯನ್ನು ಶೋಧಿಸಲು ಹೊರಟಿದ್ದು, ಸಮುದ್ರವನ್ನು ಲಂಘಿಸಿ, ಲಂಕೆಯನ್ನು ತಲುಪಿ ರಾಮನು ಕೊಟ್ಟ ಉಂಗರವನ್ನು ಸೀತೆಗೆ ಇತ್ತದ್ದು ಅತ್ಯದ್ಭುತ.

ಪ್ರಸ್ತುತ ಕಾವ್ಯದಲ್ಲಿ ಲೇಖಕರು ಸುಂದರಕಾಂಡವನ್ನು ಪದ್ಯ ರೂಪದಲ್ಲಿ ಚಿಕ್ಕದಾದರೂ ಚೊಕ್ಕವಾಗಿ ವಿವರಿಸಿದ್ದಾರೆ. ರಾಮನಾಜ್ಞೆಯಂತೆ ಹನುಮಂತನು ಸೀತೆಯನ್ನು ಶೋಧಿಸಲು ಹೊರಟ. ವಾನರ ಮಹಾ ಸೈನ್ಯವು ಸುಗ್ರೀವನ ಆಜ್ಞೆಯಂತೆ ಸೀತೆಯ ಶೋಧನೆಗಾಗಿ ನಿಂತಿದ್ದಿತು. ವಾನರ ಸೈನ್ಯವು ದೊಡ್ಡದೊಡ್ಡ ಪರ್ವತಗಳನ್ನು ದಾಟಿತಾದರೂ ಮುಂದೆ ಬಂದ ಸಾಗರವನ್ನು ಕಂಡು ದಾರಿ ಕಾಣದೆ ನಿಂತುಬಿಟ್ಟಿತು. ಸುತ್ತಲೂ ನೋಡಿದರೂ ಯಾವ ಉಪಾಯವೂ ತಕ್ಷಣ ಹೊರಡಲಿಲ್ಲ. ತನಗಿದ್ದ ಮಿತಶಕ್ತಿಯನ್ನು ಕಂಡು ಮನಸ್ಸಿನಲ್ಲೇ ನೊಂದುಕೊಂಡು ಅಲ್ಲೇ ವಾನರರ ದಂಡು ನಿಂತಿತು. ನಂತರ ಯಾವ ದಾರಿಯೂ ಕಾಣದಾಗಿ ವಾಯುಪುತ್ರ, ವಾನರಶ್ರೇಷ್ಠ ಹನುಮಂತನನ್ನು ಮನಸ್ಸಿನಲ್ಲೇ ಸ್ತುತಿಸಿತು. ಆ ಕ್ಷಣದಲ್ಲಿ ರಾಮನ ಬಂಟ ಹನುಮಂತನಲ್ಲಿಗೆ ಹೋಗಿ ಶೀಘ್ರವಾಗಿ ಬರಬೇಕೆಂದು ಪ್ರಾರ್ಥಿಸಿತು. ಹಿರಿಯರೆಲ್ಲರ ಅನುಮತಿಯನ್ನು ಪಡೆದು ಹನುಮಂತನು ಲಂಕೆಯನ್ನು ನೋಡಬೇಕೆಂಬ ಕಾತರದಿಂದ ಸಮುದ್ರ ದಂಡೆಗೆ ಬಂದನು. ಆ ಸಮುದ್ರವನ್ನು ನೋಡಿ ಹನುಮಂತನಿಗೇನೂ ಆಶ್ಚರ್ಯವಾಗಲಿಲ್ಲ. ಸಾಗರ ಲಂಘನೆ ಮಾಡುತ್ತೇನೆಂದು ಸಾಗರವನ್ನು ಹಾರಲು ಬಾಲವನ್ನು ಬಾವುಟದಂತೆ ಎತ್ತಿ ಕೈಯನ್ನು ಮುಂದೆ ಚಾಚುತ್ತ ಹಾರಲು ಉದ್ಯುಕ್ತನಾದ. ಸಾಗರವನ್ನು ಹಾರುತ್ತಿದ್ದಂತೆ ವಾನರ ಸೈನ್ಯವು ಅವನಿಗೆ ಜಯಕಾರ ಹಾಕಿ ಬೀಳ್ಕೊಟ್ಟಿತು. ಸಾಗರ ಮಧ್ಯದಲ್ಲಿ ಹಾರುತ್ತಿದ್ದಂತೆ ಸುರಸೆ ರಾಕ್ಷಸಿಯು ಹನುಮಂತನನ್ನು ಬಿಡಲಿಲ್ಲ. ಅವನ ನೆರಳನ್ನು ಹಿಡಿದಳು. ಆಂಜನೇಯನು ನೇರವಾಗಿ ಸುರಸೆಯ ಬಾಯನ್ನು ಹೊಕ್ಕು ಅವಳ ಹೊಟ್ಟೆಯನ್ನು ಬಗೆದು ನಸುನಗುತ ಹೊರಗೆ ಬಂದನು.

**ನುಗ್ಗೆಹಳ್ಳಿ ರಂಗನಾಥ**

ಸಮುದ್ರಲಂಘನದ ನಂತರ ಮಾರುತಿಯು ಸುಂದರವಾದ ಉದ್ಯಾನವನ ಹೂವುಗಳಿಂದ ಕೂಡಿದ, ಅಂದ ಅರಮನೆಗಳನ್ನೊಳಗೊಂಡ ಲಂಕಾನಗರವನ್ನು ಸೇರಿದನು. ನಗರದ ಸುತ್ತಲೂ ಬಲವಾದ ಕೋಟೆ. ಹತ್ತು ತಲೆಯ ರಾವಣನ ಅರಮನೆಯ ಬಳಿ ಬಂದ. ಅರಮನೆಯು ಸುಂದರವಾಗಿಯೂ ವೈಭವವಾಗಿಯೂ ಮೆರೆಯುತ್ತಿದ್ದಿತು. ಶತ್ರುರಾಜ್ಯವಾದ ಲಂಕೆಯನ್ನು ಆಂಜನೇಯನು ಹೆಬ್ಬಾಗಿಲಿನಿಂದ ಪ್ರವೇಶಿಸಲು ಇಚ್ಛಿಸಲಿಲ್ಲ. ಕೋಟೆಯ ಗೋಡೆಯನ್ನು ಹಾರಿ ಪುರಭವನವನ್ನು ಪ್ರವೇಶಿಸಿದನು. ಕೆಲವರು ಯುದ್ಧಾಭ್ಯಾಸ ಮಾಡುತ್ತಿದ್ದರೆ ಮತ್ತೆ ಕೆಲವರು ಜಪತಪಗಳನ್ನು ಮಾಡುತ್ತಿದ್ದರು. ಎಲ್ಲವನ್ನೂ ನೋಡುತ್ತಾ ಹನುಮಂತನು ಅಂತಃಪುರವನ್ನು ಹೊಕ್ಕನು. ಅಂತಃಪುರದಲ್ಲಿ ಜಾನಕಿಯನ್ನು ಹುಡುಕುತ್ತಾ ಸಂಪಾತಿಯನ್ನು ಮನದಲ್ಲೆ ನೆನೆಯುತ್ತಾ ರಾಮಜಪ ಮಾಡುತ್ತಾ ನಡೆದ.

ಅಲ್ಲಿಂದ ಅಶೋಕವನಕ್ಕೆ ಬಂದ, ಅಶೋಕವನದಲ್ಲಿ ಕೋಗಿಲೆಗಳ ಕಂಠವನ್ನು ಸವಿದು, ನವಿಲಿನ ನೃತ್ಯವನ್ನು ನೋಡುತ್ತಾ ಮುನ್ನಡೆಯುತ್ತಿದ್ದಂತೆ ಅಶೋಕವೃಕ್ಷವೊಂದರ ಕೆಳಗೆ ಒಬ್ಬ ಸ್ತ್ರೀ ಕುಳಿತಿದ್ದುದನ್ನು ನೋಡಿದ. ನೋಡಿದರೆ ಸೀತಾದೇವಿ! ನೋಡಿದ ತಕ್ಷಣ ಅವನಿಗೆ ಸಂತಸವಾಯಿತು. ಸೀತೆಯನ್ನು ರಕ್ಕಸಿಯರು ಸುತ್ತುವರಿದಿದ್ದರು. ಹನುಮಂತನು ಸೀತೆ ಕುಳಿತಿದ್ದ ಮರದ ಮೇಲೆ ಕುಳಿತು ಎಲ್ಲವನ್ನೂ ವೀಕ್ಷಿಸುತ್ತಿದ್ದನು. ರಾವಣ ಬರಿದ; ಹೋದ. ಹನುಮಂತನು ಶ್ರೀರಾಮಚಂದ್ರನ ಕಥೆಯನ್ನು ಹೇಳುತ್ತಾ ಮರದ ಮೇಲೆ ಕುಳಿತಿದ್ದ ಸೀತೆಯು ಇದನ್ನು ಆಲಿಸುತ್ತಾ ಮರದ ಮೇಲೆ ನೋಡಲು ಹನುಮಂತನು ಸೀತೆಗೆ ಕಾಣಿಸಿಕೊಂಡನು. ಅವನು ಕೆಳಗಿಳಿದು ಸೀತೆಯೆದುರು ನಮಸ್ಕರಿಸಿ ನಿಂತನು. ರಾವಣನೇ ಕಪಿಯ ರೂಪವನ್ನು ಧರಿಸಿ ಬಂದಿರುವನೋ ಏನೋ! ಎಂದು ಸೀತೆಗೆ ಭಾಸವಾಯಿತು, ನಂತರ ರಾಮನು ಕೊಟ್ಟ ಉಂಗುರವನ್ನು ಸೀತೆಗೆ ಕೊಟ್ಟ ಬಳಿಕ ಸೀತೆಗೆ ನಂಬಿಕೆಯಾಯಿತು. ಚೂಡಾಮಣಿಯನ್ನು ಗುರುತಿಗೆ ಕೊಟ್ಟಳು.

ಮುಂದೆ ಹನುಮಂತನ ಮೂಲಕ ರಾಕ್ಷಸ ಶಕ್ತಿಯ ತುಲನಾತ್ಮಕ ಪರೀಕ್ಷೆಯ ಪ್ರಯತ್ನ, ರಾಕ್ಷಸರಾಜ ರಾವಣನಿಗೆ ಸೆರೆಸಿಕ್ಕು ಬಾಲವನ್ನು ಸುಡಿಸಿಕೊಂಡು ಅದರಿಂದಲೇ ಲಂಕೆಯನ್ನು ದಹಿಸಿದ್ದು, ಸೀತೆಯನ್ನು ನೆನೆಯುತ್ತ ಲಂಕಾದಹನವನ್ನು ನಿಲ್ಲಿಸಿ ಹಿಂದಿರುಗಿ ಮತ್ತೆ ಸಮುದ್ರ ಲಂಘನ ಮಾಡಿ ತನ್ನ ಜೊತೆಗಾರರನ್ನು ಕೂಡಿಕೊಂಡು ರಾಮ ಸುಗ್ರೀವರಲ್ಲಿಗೆ ಹಿಂದಿರುಗಿದ್ದು ಎಲ್ಲವೂ ವಿವರಿತವಾಗಿವೆ.

ಇಷ್ಟು ಕಥೆ ಸರಳ ರಗಳೆಯಲ್ಲಿ ಪ್ರಸ್ತುತ ಭಾಗದಲ್ಲಿ ವರ್ಣಿತವಾಗಿದೆ. ಸರಳವಾದ ಭಾಷೆ ಹಾಗೂ ಸುಲಲಿತ ಶೈಲಿಯಲ್ಲಿ ರಚಿತವಾಗಿರುವ ಈ ಪುಟ್ಟ ಪುಸ್ತಕ ಆಸ್ತಿಕರೆಲ್ಲರಿಗೂ ಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.

# ಕಿಶೋರ ಜಗತ್



## ಚಕ್ರವರ್ತಿ ದಿಲೀಪ

ಹುಟ್ಟಿದ ಮೇಲೆ ಮನುಷ್ಯ ಸಾಯಲೇ ಬೇಕು. ಸಾವಿಗೆ ಅಂಜದೆ ಒಳ್ಳೆಯ ಕೆಲಸಕ್ಕಾಗಿ ತಮ್ಮ ಜೀವವನ್ನೇ ಬಲಿದಾನ ನೀಡುವ ಮಹಾನುಭಾವರು ಅಮರರಾಗುವರು. ಅಂತಹವರ ಲೌಕಿಕ ದೇಹ ನಶಿಸಿದರೂ ಕೀರ್ತಿ ಶಾಶ್ವತವಾಗಿ ಉಳಿಯುತ್ತದೆ. ಕೊಟ್ಟ ಭಾಷೆಗೆ ತಪ್ಪದೆ ಜನಹಿತಕ್ಕಾಗಿ ತನುಮನಧನಗಳನ್ನು ಧಾರೆಯೆರೆದ ಮಹಾರಾಜರನೇಕರನ್ನು ಸೂರ್ಯವಂಶದಲ್ಲಿ ಕಾಣುತ್ತೇವೆ. ಶ್ರೀರಾಮಚಂದ್ರ ಈ ವಂಶದ ರಾಜರಲ್ಲಿ ಶ್ರೇಷ್ಠನಾದವನು. ಶ್ರೀರಾಮಚಂದ್ರನ ಹಿಂದೆ ಸೂರ್ಯವಂಶದಲ್ಲಿ ಮೊದಲಿಗೆ ದಿಲೀಪ ಬಂದ. ಕಾಮಧೇನುವಿನ ಮಗಳಾದ ನಂದಿನಿಯನ್ನು ಬದುಕಿಸಲು ದಿಲೀಪಮಹಾರಾಜ ತನ್ನ ಪ್ರಾಣವನ್ನು ನೀಡಲು ಮುಂದಾದ. ಶ್ರೀರಾಮಚಂದ್ರನ ತಾತನ ತಾತ ದಿಲೀಪ. ಅಯೋಧ್ಯೆಯ ಅರಸನಾಗಿದ್ದ ದಿಲೀಪನ ಹೆಂಡತಿ ಸುದಕ್ಷಿಣಾದೇವಿ. ಇವರಿಬ್ಬರೂ ಪ್ರಜೆಗಳನ್ನು ತಮ್ಮ ಮಕ್ಕಳಂತೆ ಕಾಪಾಡುತ್ತ ಸುಖದಿಂದಿದ್ದರು. ಆದರೆ ಅವರಿಗೆ ಮಕ್ಕಳಾಗಲಿಲ್ಲವೆಂಬ ಚಿಂತೆ ಹತ್ತಿತ್ತು. ಕುಲದೀಪಕನಾದ ಪುತ್ರನನ್ನು ಪಡೆಯಲು ಕುಲಗುರುಗಳಾದ ವಸಿಷ್ಠರ ಆಶೀರ್ವಾದ ಪಡೆಯಲು ನಿರ್ಧರಿಸಿದರು. ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ರಾಜರಾಣಿ ಕಾಡಿನ ಮಧ್ಯದಲ್ಲಿದ್ದ ವಸಿಷ್ಠರ ಆಶ್ರಮಕ್ಕೆ ಹೊರಟರು. ತಮಗೆ ಭಕ್ತಿಯಿಂದ ನಮಸ್ಕರಿಸಿದ ರಾಜನನ್ನು ಆಶೀರ್ವದಿಸಿದ ವಸಿಷ್ಠರು ಆತ ಬಂದ ಕಾರಣವೇನೆಂದು ಕೇಳಿದರು. ದಿಲೀಪನು ವಿನಯದಿಂದ—"ಗುರುಗಳೇ, ನಿಮ್ಮ ಆಶೀರ್ವಾದದಿಂದ ನನ್ನ ರಾಜ್ಯದಲ್ಲಿ ಸುಖಸಂಪದಗಳು ನೆಲೆಸಿವೆ. ಆದರೆ ನನ್ನ ಕಾಲಾನಂತರ ರಾಜ್ಯವನ್ನು ಆಳಿ ಪ್ರಜೆಗಳನ್ನು ಸಂರಕ್ಷಿಸುವ ಮಗ ಹುಟ್ಟಲಿಲ್ಲವೆಂಬ ಚಿಂತೆ ಕಾಡುತ್ತಿದೆ. ನೀವೇ ಕಾಪಾಡಬೇಕು" ಎಂದನು. ತಮ್ಮ ಜ್ಞಾನ ದೃಷ್ಟಿಯಿಂದ ದಿಲೀಪನಿಗೆ ಮಕ್ಕಳಾಗದಿರಲು ಕಾರಣವೇನೆಂಬುದನ್ನು ತಿಳಿದ ವಸಿಷ್ಠರು ರಾಜನನ್ನು ಕುರಿತು "ಎಲೈ ರಾಜನೇ, ಹಿಂದೆ ನೀನು ದೇವಲೋಕಕ್ಕೆ ಹೋಗಿದ್ದಾಗ ಕಲ್ಪವೃಕ್ಷದ ಕೆಳಗೆ ನಿಂತಿದ್ದ ಕಾಮಧೇನುವಿಗೆ ನಮಿಸಲಿಲ್ಲ, ಕಾಮಧೇನುವನ್ನು ತಿರಸ್ಕರಿಸಿದ್ದರಿಂದ ನಿನಗೆ ಮಕ್ಕಳಾಗಿಲ್ಲ. ಕಾಮಧೇನುವಿನ ಮಗಳಾದ ನಂದಿನಿಯ ಸೇವೆ ಮಾಡಿದರೆ ನಿನಗೆ ಮಕ್ಕಳು ಹುಟ್ಟುತ್ತಾರೆ, ನಂದಿನಿ ಈಗ ನಮ್ಮ ಆಶ್ರಮದಲ್ಲೇ ಇದ್ದಾಳೆ. ಶ್ರದ್ಧೆಯಿಂದ ಆಕೆಯ ಸೇವೆಮಾಡು" ಎಂದರು. ಮರುದಿನ ಬೆಳಗಾದ ಕೂಡಲೇ ಸುದಕ್ಷಿಣಾದೇವಿ ನಂದಿನಿಯ ಮೈತೊಳೆದು, ಅರಿಶಿನ ಕುಂಕುಮ ಹೂವುಗಳಿಂದ ಪೂಜಿಸಿದಳು. ಕರುವಿಗೆ ಹಾಲು ಕುಡಿಸಿದ ಮೇಲೆ ನಂದಿನಿ ಮೇಯಲು ಹೊರಟಳು. ಅವಳನ್ನು ರಕ್ಷಿಸಲು ರಾಜ ಹಿಂಬಾಲಿಸಿದ. ರುಚಿಕರವಾದ ಎಳೆ ಹುಲ್ಲನ್ನು ಕಿತ್ತು ನಂದಿನಿಗೆ ತಿನ್ನಿಸಿದ. ಅವಳ ಮೈಮೇಲೆ ಕುಳಿತುಕೊಳ್ಳಲು ಬರುತ್ತಿದ್ದ ನೊಣ ಮತ್ತು ಕೀಟಗಳನ್ನು ಓಡಿಸಿದ. ಅವಳು ನೀರು ಕುಡಿದಲ್ಲಿ ತಾನೂ ಕುಡಿದ. ಅವಳು ಮಲಗಿದಲ್ಲಿ ತಾನೂ ಕುಳಿತ. ಹೀಗೆ ಸಂಜೆಯ ತನಕ ನಂದಿನಿಯ ಸೇವೆ ಮಾಡಿ ಅವಳೊಂದಿಗೆ ಆಶ್ರಮಕ್ಕೆ ಹಿಂದಿರುಗಿದ. ಸುದಕ್ಷಿಣಾದೇವಿ ಗೋಪೂಜೆ ಮಾಡಿ ಆರತಿ ಬೆಳಗಿದಳು. ನಂದಿನಿ ಕರುವಿಗೆ ಹಾಲು ಕುಡಿಸಿ ಮಲಗಿದ ಮೇಲೆ ರಾಜರಾಣಿಯರು ಗೆಡ್ಡೆ ಗೆಣಸು ತಿಂದು ತಾವೂ ಮಲಗಿದರು. ಹೀಗೆ ಇಪ್ಪತ್ತೊಂದು ದಿನ ಗೋಸೇವೆ ಸಾಂಗವಾಗಿ ನೆರವೇರಿತು.

ಇಪ್ಪತ್ತೆರಡನೆಯ ದಿನ ನಂದಿನಿ ದಿನಾ ಮೇಯಲು ಹೋಗುತ್ತಿದ್ದ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಮೇಯಲು ಹೊರಟಳು. ರಾಜ ಮೈಯೆಲ್ಲ ಕಣ್ಣಾಗಿ ನಂದಿನಿಯನ್ನು ಕಾಯುತ್ತ ಅವಳ ಹಿಂದೆ ಹೊರಟ. ಸ್ವಲ್ಪ ಸಮಯವಾಗಲು ಅಡವಿಯ ಮಧ್ಯದಿಂದ ಹಾರಿ ಬಂದ ಸಿಂಹವೊಂದು ನಂದಿನಿಯ ಬೆನ್ನಮೇಲೇರಿ ಅವಳ ಕೊರಳ ರಕ್ತ ಹೀರಲು ಬಾಯಿಬಿಟ್ಟು ಕುಳಿತುಬಿಟ್ಟಿತು. ದಿಲೀಪ ಕೋಪದಿಂದ ಸಿಂಹವನ್ನು ಸಾಯಿಸಲು ಬಾಣವನ್ನು ಗುರಿಮಾಡಿದನು. ಆದರೆ ಬಾಣ ಬಿಡಲು ರಾಜನ ಕೈ ಮೇಲೇಳಲೇ ಇಲ್ಲ. ರಾಜ ಚಿತ್ರದ ಬೊಂಬೆಯಂತಾದ. ಆಗ ಸಿಂಹ ರಾಜನನ್ನು ಕುರಿತು– "ಎಲೈ ದಿಲೀಪ ಚಕ್ರವರ್ತಿ, ನಿನ್ನ ಪ್ರಯತ್ನವನ್ನು ನಿಲ್ಲಿಸು. ನೀನು ಎಷ್ಟು ಸಲ ಕಷ್ಟಪಟ್ಟರೂ ನನ್ನ ಮೇಲೆ ಬಾಣ ಬಿಡಲಾರೆ. ನಾನು ಶಿವನ ಸೇವಕ. ಕುಂಭೋದರನೆಂದು ನನ್ನ ಹೆಸರು. ಇಲ್ಲಿರುವ ದೇವದಾರು ಮರವನ್ನು ಪಾರ್ವತಿ ಬೆಳೆಸಿದ್ದಾಳೆ. ಅದನ್ನು ಆಕೆ ತನ್ನ ಮಗನಂತೆಯೇ ಪ್ರೀತಿಸುತ್ತಾಳೆ. ಆದ್ದರಿಂದ ಕಾಡಾನೆಗಳ ಹಾವಳಿಯಿಂದ ಮರವನ್ನು ರಕ್ಷಿಸಲು ನನ್ನನ್ನು ಸಿಂಹವಾಗಿ ಮಾಡಿ ಈ ಕಾಡಲ್ಲಿ ಬಿಟ್ಟಿದ್ದಾಳೆ. ಈ ಪ್ರದೇಶಕ್ಕೆ ಬರುವ ಪ್ರಾಣಿಗಳನ್ನು ಕೊಂದು ತಿನ್ನುವಂತೆ ಹೇಳಿದ್ದಾಳೆ. ಈಗ ನನಗೆ ಹೊಟ್ಟೆ ಹಸಿದಿದೆ. ಸಮಯಕ್ಕೆ ಸರಿಯಾಗಿ ಸಿಕ್ಕಿರುವ ಈ ಹಸುವನ್ನು ತಿಂದು ತೇಗುತ್ತೇನೆ. ನೀನು ಗುರುಗಳ ಬಳಿ ಹೋಗಿ ಈ ಸಂಗತಿಯನ್ನು ಹೇಳು. ಅವರು ನಿನ್ನ ಮೇಲೆ ಕೋಪಿಸಿಕೊಳ್ಳುವುದಿಲ್ಲ. ನಾನು ಶಿವದೂತನೆಂಬುದು ಅವರಿಗೆ ತಿಳಿದಿದೆ. ಆಯುಧದ ಸಹಾಯದಿಂದ ಯಾವುದನ್ನು ಕಾಪಾಡಲು ಸಾಧ್ಯವಿಲ್ಲವೋ ಅದನ್ನು ಕಾಪಾಡದಿದ್ದರೆ ನಿನಗೆ ಅಪಕೀರ್ತಿ ಬರುವುದಿಲ್ಲ" ಎಂದಿತು.

ದಿಲೀಪನು ಸಿಂಹವನ್ನು ಕುರಿತು— "ಎಲೈ ಶಿವದೂತನೇ, ಶಿವನ ಆಜ್ಞೆಯನ್ನು ಮೀರಲು ನಾನು ಸಮರ್ಥನಲ್ಲ. ಆದರೆ ಗುರುವಿನ ಆಜ್ಞೆಯನ್ನು ಪಾಲಿಸಬೇಕಾದದ್ದು ನನ್ನ ಕರ್ತವ್ಯ. ಗುರುಗಳ ಸಂಪತ್ತಾದ ಈ ಹಸುವನ್ನು ರಕ್ಷಿಸುವ

ಬಿ. ಎಸ್. ಸರೋಜ.

ಹೊಣೆ ಹೊತ್ತಿದ್ದೇನೆ. ಪೂಜ್ಯ ಗೋಮಾತೆ ನನ್ನೆದುರಿಗೆ ನಿನ್ನ ಬಾಯಿ ಸೇರುವುದನ್ನು ನೋಡ ಲಾರೆ. ಸಂಜೆಯಾದೊಡನೆ ತಾಯಿ ಮನೆಗೆ ಬಂದು ಹಾಲು ಕುಡಿಸುವಳೆಂದು ಕಾಯುತ್ತ ಕರು ಆಶ್ರಮದಲ್ಲಿದೆ. ನಂದಿನಿ ಸತ್ತರೆ ಕರು ತಬ್ಬಲಿ ಯಾಗುತ್ತದೆ. ಆದ್ದರಿಂದ ಈ ಹಸುವನ್ನು ದಯ ವಿಟ್ಟು ಬಿಟ್ಟುಬಿಡು. ನನ್ನನ್ನು ತಿಂದ ನಿನ್ನ ಹಸಿವೆ ಯನ್ನು ಹಿಂಗಿಸಿಕೋ" ಎಂದನು.

ರಾಜನ ಮಾತು ಕೇಳಿ ಸಿಂಹ ನಗುತ್ತ ಆತ ನನ್ನು ಕುರಿತು— "ಎಲೈ ರಾಜನೇ ನೀನು ಹೇಳುತ್ತಿರುವುದೇನು ? ಕೇವಲ ಒಂದು ಹಸು ವನ್ನು ರಕ್ಷಿಸಲು ಚಕ್ರವರ್ತಿಯಾದ ನಿನ್ನ ಪ್ರಾಣ ವನ್ನು ಕಳೆದುಕೊಳ್ಳುವೆಯಾ ? ಈ ಹಸು ಸತ್ತರೆ ಕೊಡದ ತುಂಬ ಹಾಲು ಕರೆಯುವ ಲಕ್ಷ ಹಸು ಗಳನ್ನು ಗುರುಗಳಿಗೆ ಕೊಟ್ಟು ಅವರನ್ನು ಸಮಾಧಾನಪಡಿಸುವ ಶಕ್ತಿ ನಿನಗಿದೆ. ಸಂಪತ್ತಿ ನಲ್ಲಿ ನೀನು ಇಂದ್ರನಿಗೆ ಸರಿಸಮಾನನಾದವನು. ನಿನ್ನ ಪ್ರಾಣವನ್ನು ಮೊದಲು ರಕ್ಷಿಸಿಕೋ. ನೀನು ಪ್ರಜೆಗಳನ್ನು ರಕ್ಷಿಸಬಹುದು" ಎಂದಿತು. ರಾಜನು ಏನೆನ್ನುವನೋ ಎಂದು ನಂದಿನಿ ಆತನನ್ನೇ ನೋಡುತ್ತ ಬೆದರುತ್ತ ನಿಂತಿದ್ದಳು. ರಾಜನು ಆಕೆಯನ್ನು ಉಳಿಸಲು ದೃಢಸಂಕಲ್ಪ ಮಾಡಿದ ವಿನಯದಿಂದ ಸಿಂಹವನ್ನು ಕುರಿತು— "ಕಷ್ಟಕ್ಕೆ ಸಿಕ್ಕಿದವರನ್ನು ಕಾಪಾಡುವುದು ಕ್ಷತ್ರಿಯನಾದ ನನ್ನ ಧರ್ಮ. ಅಸಹಾಯಕವಾಗಿ ನಿಂತಿರುವ ಈ ಹಸುವನ್ನು ಕಾಪಾಡಲಾಗದಿದ್ದರೆ ನಾನು ಬದುಕಿ ಏನು ಪ್ರಯೋಜನ ? ಈ ಹಸುವನ್ನು ರಕ್ಷಿಸಲು ಗುರುಗಳು ಆಜ್ಞೆಮಾಡಿದ್ದಾರೆ. ಗೋಮಾತೆಯನ್ನು ಕಾಪಾಡಿ ಗುರುಗಳ ಆಜ್ಞೆ ಪಾಲಿಸುವ ಸಲುವಾಗಿ ನನ್ನ ದೇಹ ಹೋದರೇನು? ಕೀರ್ತಿ ಉಳಿದರೆ ಸಾಕು. ನನ್ನ ಮಾತನ್ನು ಮನ್ನಿಸಿ ಹಸುವನ್ನು ಬಿಟ್ಟುಬಿಡು" ಎಂದನು. ರಾಜನ ಮಾತಿಗೆ ಒಪ್ಪಿ ಸಿಂಹ ನಂದಿನಿಯನ್ನು ಬಿಟ್ಟುಬಿಟ್ಟಿತು. ರಾಜ ಸಂತೋಷದಿಂದ ಸಿಂಹದ ಹತ್ತಿರ ಹೋಗಿ ತಲೆಬಾಗಿ ನಿಂತನು. ತನ್ನನ್ನು ತಿಂದು ತೃಪ್ತನಾಗುವಂತೆ ಕೇಳಿಕೊಂಡನು. ಆದರೆ ಸಿಂಹ ರಾಜನ ಮೇಲೆ ಎರಗಲಿಲ್ಲ. ಆಕಾಶದಿಂದ ದೇವತೆಗಳು ಅವನ ಮೇಲೆ ಹೂವಿನ ಮಳೆ ಕರೆದರು. "ಮಗನೇ ಎದ್ದೇಳು" ಎಂಬ ಮಾತು ಕೇಳಿ ರಾಜ ತಲೆಯೆತ್ತಿದನು. ತಾಯಿಯಂತೆ ಪ್ರೀತಿಯಿಂದ ರಾಜನನ್ನು ನೋಡುತ್ತ ನಂದಿನಿ ನಿಂತಿದ್ದಳು. ಸಿಂಹ ಕಾಣೆಯಾಗಿತ್ತು. ನಂದಿನಿ ದಿಲೀಪನ ಮೈಸವರಿ- ಎಲೈ ರಾಜನೇ ಎದ್ದೇಳು. ಆ ಸಿಂಹ ಮಾಯಾಸಿಂಹ, ನಿನ್ನ ನಿಷ್ಠೆಯನ್ನು ಪರೀಕ್ಷಿಸಲು ಬಂದಿತ್ತು. ನಿನ್ನ ಗುರುಭಕ್ತಿ ಮತ್ತು ಕರ್ತವ್ಯನಿಷ್ಠೆಗೆ ಮೆಚ್ಚಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡು" ಎಂದಿತು. ರಾಜನು ಸಂತೋಷದಿಂದ ನಂದಿನಿಗೆ ನಮಸ್ಕಾರ ಮಾಡಿ 'ಸೂರ್ಯವಂಶವನ್ನು ಬೆಳಗುವ ಧರ್ಮಿಷ್ಠನಾದ ಮಗ ಹುಟ್ಟುವಂತೆ ವರ ಕೊಡುವಂತೆ' ಬೇಡಿದನು. ನಂದಿನಿ ದಿಲೀಪನನ್ನು ಆಶೀರ್ವದಿಸಿ 'ಎಲೆಯ ದೊನ್ನೆಯಲ್ಲಿ ತನ್ನ ಹಾಲನ್ನು ಕರೆದು ಕುಡಿದರೆ ಅವರ ಆಸೆ ಈಡೇರುವುದಾಗಿ' ವರನೀಡಿತು. ನಂದಿನಿಯನ್ನು ಹಿಂಬಾಲಿಸಿ ರಾಜ ಆಶ್ರಮ ಸೇರಿದ. ಕರುವಿಗೆ ಹಾಲು ಕುಡಿಸಿದ ಮೇಲೆ ಉಳಿದ ಹಾಲನ್ನು ಕರೆದು ವಸಿಷ್ಠರ ಅಪ್ಪಣೆ ಪಡೆದು ರಾಜರಾಣಿಯರು ಎಲೆಯ ದೊನ್ನೆಯಲ್ಲಿ ಹಾಲು ಕುಡಿದರು. ಮರುದಿನ ರಾಜರಾಣಿಯರು ಕರುವಿ ನೊಡನಿದ್ದ ನಂದಿನಿಗೆ ಮತ್ತು ವಸಿಷ್ಠರಿಗೆ ನಮಸ್ಕರಿಸಿ ಅಯೋಧ್ಯೆಗೆ ಹೊರಟರು. ಕಾಲ ಕ್ರಮದಲ್ಲಿ ನಂದಿನಿಯ ವರದಿಂದ ಸುದಕ್ಷಿಣಾದೇವಿ ಸುಂದರವಾದ ಗಂಡುಮಗುವನ್ನು ಹಡೆದಳು. ವಸಿಷ್ಠರು ಮಗುವಿಗೆ 'ರಘು' ಎಂದು ನಾಮಕರಣ ಮಾಡಿದರು. ರಘು ಬೆಳೆದು ದೊಡ್ಡವನಾಗಿ ಸೂರ್ಯವಂಶದ ಅರಸನಾದನು. ತನ್ನ ಪರಾಕ್ರಮದಿಂದ ಇಂದ್ರನೊಡನೆ ಹೋರಾಡಿ ನೂರು ಅಶ್ವಮೇಧಯಾಗ ಮಾಡಿದ ಫಲ ತಂದೆಗೆ ಬರುವಂತೆ ಮಾಡಿದನು. ಹೀಗೆ ಗೋಸೇವೆ ಮಾಡಿ ತನ್ನ ಪ್ರಾಣವನ್ನೇ ಪಣವಾಗಿಟ್ಟು ದಿಲೀಪ ಮಹಾರಾಜ ಸುಪುತ್ರನನ್ನು ಪಡೆದನು.

---

## ಇವೆಲ್ಲವೇತಕೇ ?

ವೆಂಕಟರಮಣನ ಸ್ಮರಣೆಮಾಡದ
 ಮನವಿದ್ದೇತಕೆ ?
ತಿಮ್ಮಪ್ಪನ ನಾಮ ನುಡಿಯದಂಥ
 ನಾಲಿಗೆಯೇತಕೆ ?

ಗೋವಿಂದನ್ನ ಪೂಜೆ ಮಾಡದ
 ಕೈಗಳೇತಕೆ ?
ತಿಮ್ಮಪ್ಪನ ಪ್ರದಕ್ಷಿಣೆ ಹಾಕದಂಥ
 ಕಾಲುಗಳೇತಕೆ ?

ಗೋವಿಂದನ್ನ ನೋಡದಂತಹ
 ಕಣ್ಣುಗಳೇತಕೆ ?
ವೆಂಕಟರಮಣನ ಕಥೆಯ ಕೇಳದ
 ಕಿವಿಗಳೇತಕೆ ?

ತಿಮ್ಮಪ್ಪನಿಗೆ ವಂದಿಸದಂತಹ
 ಮಸ್ತಕವೇತಕೆ ?



ಶ್ರೀ ಆರ್. ಕೆ. ಶಾನಭೋಗ

ಗೋವಿಂದಸೇವಾ ಘಟಿಸಿದಂತಹ
 ದೇಹವೇತಕೆ?

ವೆಂಕಟರಮಣನ ನಂಬದಂತಹ
 ಬುದ್ಧಿಯೇತಕೆ ?
ತಿಮ್ಮ, ಗೋವಿಂದ, ವೆಂಕಟನೆನ್ನದಾ
 ಜನ್ಮವೇತಕೆ ?

ವೆಂಕಟರಮಣನ ತಿಳಿಯುವಂತಹ
 ವಿದ್ಯೆಯೇತಕೆ?
ಗೋವಿಂದನ್ನು ನಿಂದಿಸುವಂತಹ
 ಹೆಂಡತಿಯೇತಕೆ ?

ತಿಮ್ಮರ್ಪಣ ಮಾಡದಂತಹ
 ದ್ರವ್ಯವೇತಕೆ ?
ವೆಂಕಟರಮಣನಲಿ ಭಕ್ತಿಇಲ್ಲದಾ
 ಮಕ್ಕಳೇತಕೆ ?

(16 ನೇ ಪುಟದಿಂದ)

ಸ್ವಚ್ಛಂದಂ ಮಕರಂದ ಸುಂದರ ಗಲನ್ಮಂ
ದಾಕಿನೀ ಮೇದುರಂ
ಶ್ರೀಗೋವಿಂದ ಪದಾರವಿಂದ ಮಶುಭ
ಸ್ಕಂದಾಯ ವಂದಾಮಹೇ ॥

ಅನಂತ ತುಂದಿಲರಾದ ಇಂದ್ರಾದಿದೇವತೆಗಳು ತಲೆಬಾಗಿದಾಗ ಅವರ ಕಿರೀಟಮಣಿಗಳ ಹೊಂಬೆಳಕಿನಲ್ಲಿ ನಿಚ್ಚಳವಾಗಿ ತೋರುವ, ಅವರ ಸುಂದರ ತಲೆಗೂದಲ ಸಮೂಹ ದುಂಬಿಗಳ ಹಿಂಡು ತಾವರೆಯನ್ನು ದಟ್ಟವಾಗಿಸುವಂತೆ ಸುತ್ತುವರಿದಿದೆ. ಇಂತಹ ಗೋವಿಂದನ ಪಾದಪದ್ಮಗಳು ನಮ್ಮ ಕೆಡಕುಗಳನ್ನು ನಿವಾರಿಸಲಿ ಎಂಬುದು ಜಯದೇವ ಕವಿಯ ಹಾರೈಕೆ.

ಹತ್ತನೆಯ ಸರ್ಗ ಚತುರ ಚತುರ್ಭುಜದ ಪರಾಕ್ರಮ ವರ್ಣನೆ. ಕಂಸನ ಆಹ್ವಾನದಂತೆ ಬಿಲ್ಲಹಬ್ಬಕ್ಕೆ ಹೋದ ಕೃಷ್ಣ ಕುವಲಯಾ ಪೀಡ ನೆಂಬ ಆನೆಯೊಡನೆ ಸೆಣಸಾಡಬೇಕಾಯಿತು. ಆಗ :—

ಸ ಪ್ರೀತಿಂ ತನುತಾಂ ಹರಿಃ ಕುವಲಯಾ
ಪೀಡೇನ ಸಾರ್ಧಂ ರಣೇ
ರಾಧಾ ಪೀನಪಯೋಧರಸ್ಮರಣ ಕೃತ್ಕುಂಭೇನ
ಸಂಭೇದವಾನ್
ಪತ್ರೇಸ್ವಿದ್ಯತಿ ಮೀಲತಿ ಕ್ಷಣಮಪಿ
ಕ್ಷಿಪ್ರಂತದಾಲೋಕನಾತ್
ವ್ಯಾಮೋಹೇನ ಜಿತಂ ಜಿತಮಭೂತ್ಕಂಸಸ್ಯ
ಕೋಲಾಹಲಃ ॥

ಕುವಲಯಾಪೀಡನ ಕುಂಭಸ್ಥಳ ಕಂಡಾಗ, ಅದನ್ನು ಸೀಳಿದಾಗ, ಕೃಷ್ಣನಿಗೆ ರಾಧೆಯ ಕುಂಭಸ್ತನಗಳ ನೆನಪು ಬಂದು ಕೆಂಪಾದ ಕೆನ್ನೆಗಗಳಲ್ಲಿ ಬೆವರಹನಿ ಕುಡಿತು; ಚಣಕಾಲ ಕಣ್ಣು ಮುಚ್ಚಿದ. ಒಡನೆಯೇ ಅದನ್ನು ನೋಡಿದ ಕಂಸ–'ಗೆದ್ದೆ, ಗೆದ್ದೆ' ಎಂದು (ವ್ಯರ್ಥವಾಗಿ) ಕೂಗಾಡಿದ !

ಸಾನಂದ ದಾಮೋದರ ಹನ್ನೊಂದನೆಯ ಸರ್ಗದ ನಾಯಕ.

ಹನ್ನೆರಡನೆಯ ಸರ್ಗದಲ್ಲಿ ರಾಧಾಮಾಧವರ ಮಧುರ ಮಿಲನ. ಆದರಿಂದಲೇ ಇಲ್ಲಿ ಮಾಧವನಿಗೆ ಸುಪ್ರೀತ ಪೀತಾಂಬರ ಎಂಬ ಹೆಸರು. ಇಲ್ಲಿ ಶೃಂಗಾರದ ಪರಾಕಾಷ್ಠೆಯ ಪದಚಿತ್ರಣ. ಕೊನೆಯಲ್ಲಿ ಜಯದೇವನ ಮಾತುಗಳಲ್ಲೇ ಕೃತಿಯ ಬಗ್ಗೆ ಚಿಂತನೆ.

ಯದ್ಗಾಂಧರ್ವಕಲಾಸು ಕೌಶಲ ಮನು
ಧ್ಯಾನಂ ಚ ಯದ್ವೈಷ್ಣವಂ
ಯಚ್ಛೃಂಗಾರ ವಿವೇಕತತ್ವರಚನಾ
ಕಾವ್ಯೇಷು ಲೀಲಾಯಿತಂ
ತತ್ಸರ್ವಂ ಜಯದೇವ ಪಂಡಿತಕವೇಃ
ಕೃಷ್ಣೈಕ ತಾನಾತ್ಮನಃ
ಸಾನಂದಾಃ ಪರಿಶೋಧಯಂತು ಸುಧಿಯಃ
ಶ್ರೀ ಗೀತಗೋವಿಂದತಃ

"ಗಂಧರ್ವಕಲೆಯಾದ ಸಂಗೀತದಲ್ಲಿ ನಿಪುಣತೆ, ಜೊತೆಗೆ ವೈಷ್ಣವ ಚಿಂತನೆ; ಶೃಂಗಾರ ತತ್ತ್ವದ ಜೊತೆ ಮಿಶ್ರಿತವಾದ ಕಾವ್ಯವಿಲಾಸ– ಇವೆಲ್ಲವನ್ನೂ ಮಾಧವನಲ್ಲಿ ನೆಟ್ಟ ಮನಸ್ಸುಳ್ಳ ಜಯದೇವಪಂಡಿತನ ಕೃತಿ ಗೀತಗೋವಿಂದದಿಂದ ಬುದ್ಧಿಶಾಲಿಗಳು ಸಂತಸದಿಂದ (ತಮಗೆ ಬೇಕಾದ್ದನ್ನು) ಆಯ್ದುಕೊಳ್ಳಲಿ.

ಹೀಗೆ ಜಯದೇವನ ಈ ಮಧುರ ಕೃತಿಯಲ್ಲಿ ಕೃಷ್ಣಭಕ್ತರು, ಪಂಡಿತಕವಿಗಳು, ರಸಿಕರು– ಯಾರಿಗೆ ಯಾವುದು ಬೇಕೋ ಅದು ಇಲ್ಲಿ ಸಿಕ್ಕುತ್ತದೆ. ಇದು ಶೃಂಗಾರ ರಸಪೂರಿತ ವಾದುದಾದರೂ ಅಶ್ಲೀಲವೆಂದು ನಾವು ಇದನ್ನು ಹೇಳಲು ಕೆಚ್ಚೆದೆ ಬೇಕು, ಈ ಕಾವ್ಯದ ಕೊನೆಗೊಂದು ಮಾತು ಬರುತ್ತದೆ. ಇದು ಉತ್ಪ್ರೇಕ್ಷೆಯಲ್ಲ; ಅನುಭವದ ಮಾತು ಎಂದರೆ ತಪ್ಪಾಗಲಾರದು.

'ಸಾಧ್ವೀ ಮಾಧ್ವೀಕಚಿಂತಾ ನ ಭವತಿ
ಭವತಃ ಶರ್ಕರೇ ಕರ್ಕಶಾಸಿ
ದ್ರಾಕ್ಷೇ ದ್ರಕ್ಷ್ಯಂತಿ ಕೇ ತ್ವಾಂ ಅಮೃತ ಮೃತ
ಮಸಿ ಕ್ಷೀರನೀರಂ ರಸಸ್ತೇ
ಮಾಕಂದ ಕ್ರಂದ ಕಾಂತಾಧರ ಧರಣಿ ತಲಂ
ಗಚ್ಛ ಯಚ್ಛಂತಿ ಭಾವಂ
ಯಾವಚ್ಛೃಂಗಾರಸಾರಂ ಶುಭಮಿವ
ಜಯದೇವಸ್ಯ ವೈದಗ್ಧ್ಯವಾಚಃ ॥

ಜಯದೇವಕವಿಯ ಜಾಣ್ಮುಡಿಯಾದ ಈ ಮಧುರ ಕಾವ್ಯದಲ್ಲಿ ಸಾರವಿರುವವರೆಗೆ, 'ಜೇನೇ, ನಿನ್ನನ್ನು ನೆನೆಯುವುದು ಸರಿಯಲ್ಲ', ಸಕ್ಕರೆ ನೀನು ಒರಟು, ದ್ರಾಕ್ಷಿ ನಿನ್ನ ನೋಡುವವರಾರೂ ಯಾರು? ಅಮೃತ, ನೀನು ಸತ್ತೆ, ಹಾಲು, ನೀರಿನಲ್ಲಿ ಸಾರವಿಲ್ಲ. ಪಕ್ವವಾದ ಹಣ್ಣೇ, ನೀನಿನ್ನು ಅಳುತ್ತಿರಬಹುದು, ಹೀಗಿರುವಾಗ ಪ್ರಿಯೆಯ ಚೆಂದುಟಿಯೇ, ನೀನಾದರೂ ಇವರ ಜೊತೆ ಸಮಾನತೆ ಬಯಸದೆ ನೆಲವನ್ನಾಶ್ರಯಿಸು."

ಇದಕ್ಕಿಂತ ಹೆಚ್ಚಿನ ವಿಮರ್ಶೆಯ ಅಗತ್ಯವಿಲ್ಲ. ಸಂಗೀತದ ಸವಿ ಸಕ್ಕರೆಯ ಸವಿಯಹಾಗೆ; ಅನುಭವಿಸಬೇಕು. ಈ ಕೃತಿ ಅನೇಕ ಭಾಷೆಗಳಿಗನುವಾದ ಹೊಂದಿ ಪಾಶ್ಚಾತ್ಯ ಸಂಗೀತಜ್ಞರೂ ಮೆಚ್ಚಿ ತಲೆದೂಗುವಂತೆ ಮಾಡಿದ ಕೀರ್ತಿಯೇ ಸಾಕು. ರಸಿಕರ ಮೆಚ್ಚುಗೆಯೇ ಕಾವ್ಯದ ಸಾರ್ಥಕತೆ.

*

# ವೆಂಕಟರಮಣನ

ಶ್ರೀಮತಿ ಸುಧಾಬಾಯಿ.

ರಾಗ : ಯದುಕುಲಕಾಂಬೋದಿ                ತಾಳ ; ರೂಪಕ

ವೆಂಕಟರಮಣನ ಪಾದವನಂಬಿರೋ ಸಜ್ಜನರುಗಳೆಲ್ಲ
ಕಲಿಯುಗದಲಿ ಸಾಕ್ಷಾತ್ಕರಿಸೀ ನಿಂತ ಪರಮ ಪುನೀತಾ ||ವೆಂಕಟ ||

ಭಕ್ತರಾಭೀಷ್ಟ ವಿವರಿಸುವುದಕ್ಕಾಗಿ ವೈಕುಂಠವಾ ಬಿಟ್ಟಾ
ಕಿರಿಪೋದಳೆಂದು ನಟನೆಯ ತಾ ಮಾಡಿ ಪದ್ಮಾವತಿಯ
ಕೂಡಿ ಕಲ್ಯಾಣೋತ್ಸವ ಬಕುಳೆಗೆ ತಾ ನೋಡಿಸುತಾ
ಬೆಟ್ಟದ ಮೇಲಿನ ದಿವ್ಯಾ || ವೆಂಕಟ ||

ಅಜತಾ ಬಂದನೂ ಅಂಜನಾಚಲಕೇ ಹರಿಯನೇ
ಕೊಂಡಾಡೀ ಪ್ರತಿವರ್ಷ ಬ್ರಹ್ಮೋತ್ಸವ ಮಾಡಿಸುತಾ
ಕಲಿಯುಗವಾಗೋ ತನಕಾ
ನಿತ್ಯ ಉತ್ಸವ ಪಚ್ಚ ತೋರಣಗಳಿಂದೇ
ಭೂ ವೈಕುಂಠವೆಂದೆನೀಸಿನಿ ಅಭಯದಾತನಿಗೆ
ಅಂಜಲಿನೀಡಿದರೆ ಕಪಿಲಾನಾಮಕ ಪರಮಾತ್ಮನು ಒಲಿವಾ
|| ವೆಂಕಟ ||

14 ನೇ ಪುಟದಿಂದ)

ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತನ
ಕರುಣಿಸಿದೆ ಪುರಂದರವಿಠಲ ನರಸಿಂಹ''

ಪುರಂದರದಾಸರ ದೃಷ್ಟಿಯಲ್ಲಿ ತಿರುಪತಿ ಭೂವೈಕುಂಠವೇ. 'ಬಂದು ನಿಂದಿಹ ನೋಡಿ ಭೂತಳದಿ ವೆಂಕಟ' ಎನ್ನುತ್ತಾರೆ ದಾಸರು. 'ವಾಸವಾಗಿದ್ದ ಶ್ರೀವೈಕುಂಠನಿಲಯಗೆ ಶೇಷಗಿರಿವಾಸ ವೆಂಕಟರಾಯಗೆ' ಮಂಗಳವನ್ನು ಹಾಡುತ್ತಾರೆ. ವೆಂಕಟರಮಣನೇ "ಭೂವೈಕುಂಠವಿದೆಂದು ಹಸ್ತದಿ ತೋರಿಸುವ' ನಂತೆ ಎಲ್ಲ ಭಕ್ತರ ಅಭೀಷ್ಟಗಳನ್ನು ತೀರಿಸುವುದಕ್ಕೆ 'ಕೈವಲ್ಯಸ್ಥಾನವನ್ನು' ಬಿಟ್ಟು ಬಂದ ನಂತೆ ದಾಸರ ಮುಂದೆ ವೈಕುಂಠವೆಲ್ಲ ಕಾಣಿಸುತ್ತದೆ. ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರೂ ಕಾಯುತ್ತಿದ್ದಾರೆ. ಸೇರಿ ಸೇವಿಪರಲ್ಲಿ ಸನಕಾದಿಗಳು, ಗರುಡ ಕಿನ್ನರ ನಾರದಾದಿ ಗಂಧರ್ವರು ಕೂಡಿ ಇದ್ದಾರೆ. ದಾಸರು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಜಪತಪಗಳನ್ನು ಮುಗಿಸಿಕೊಂಡು ಮಹಾದ್ವಾರವನ್ನು ಸೇರಿದರು. ಪ್ರದಕ್ಷಿಣೆ ಮಾಡಿದರು. ಗರುಡ ಕಂಭವನ್ನು ನೋಡಿ ಸಂತೋಷದಿಂದ ಕೊಂಡಾಡಿದರು. ಎರಡನೆಯ ದ್ವಾರವನ್ನು ಸೇರಿದರು. ಅಲ್ಲಿ ಸ್ವಾಮಿದರ್ಶನಕ್ಕಾಗಿ ಜನರು ತೊಂದರೆ ಪಡುತ್ತಿದ್ದಾರೆ. ದಾಸರು ಮೂಲಸ್ಥಾನ ಸೇರಿದರು. ಅವರ ದೃಷ್ಟಿಯಲ್ಲಿ ಮೊದಲು ಬಿದ್ದುದ್ದು ಕಿರೀಟವೇ. ಅದು ರವಿಕೋಟಿ ತೇಜದಿಂದ ಪ್ರಕಾಶಿಸುತ್ತದೆ. ಆ ಮೇಲೆ ಅವರು ತಿರುಮಣಿಯನ್ನು ಕಂಡರು. ಚದರ ಹಸ್ತದಿ ಶಂಖಚಕ್ರಗದಾಬ್ಜಗಳನ್ನು ಕಂಡರು. ಕುಂಡಲರಾಯನನ್ನು ನೋಡಿ ಮುಗ್ಧರಾದರು. ನೋಟಕಾಶ್ಚರ್ಯವಾದ ನಗೆಮುಖವನ್ನು ನೋಡಿ ಮೈಮರೆತರು. ವರಮಂದಹಾಸವನ್ನು ನೋಡಿ ಪನ್ನಗಾದ್ರಿಪತಿ ನನಗೆ ನೀ ಗತಿ' ಎಂದು ಹಾಡಿದರು. ಕರವೀರ ಕಲ್ಹಾರಾದಿ ಪೂವಿನ ಹಾರಗಳನ್ನು ಕೊರಳಲ್ಲಿ ಕಂಡರು. 'ಉರದಲ್ಲಿ ಶ್ರೀದೇವಿಯಳ' ಕಂಡರು. ಉನ್ನತದ ಕೌಸ್ತುಭವ ಕಂಡರು. ವೈಜಯಂತೀಮಾಲೆಯನ್ನು ನೋಡಿದರು. 'ನಿರುಪಮ ಖಚಿತ ಕಟಸೂತ್ರವನ್ನು ನೋಡಿದರು. ಚಾರು ಪೀತಾಂಬರವನ್ನು ನೋಡಿದರು. ಪದಯುಗದಲ್ಲಿ ನೂಪುರ ಇಟ್ಟಿಹನ ಕಂಡರು. 'ವೈಕುಂಠರಮಣ ವೇದಾಂತ ನಿನ್ನಯ ಪಾದಪಂಕಜ ಕಂಡ ಮೇಲೆ ಮತ್ತೆ ಮಾನವನ ಬೇಡಿಸುವುದುಚಿತವೆ' ಎಂದರು. 'ಉರಗಾದ್ರಿಯಲ್ಲಿ ಚಂದ್ರಪುಷ್ಕರಿಣಿ ಮೊದಲಾದ ಪರಿಪರಿ ತೀರ್ಥದಲಿ ಮುಳುಗಿ ತಿರುವೇಂಗಳಪ್ಪ ಶ್ರೀಪುರಂದರವಿಠಲನ ಚರಣಸೇವೆಯ ಮಾಡಲರಿಯದ ಕಪಟತನುವಿನಲಿ ಈ ಜೀವವಿದ್ದು ಫಲವೇನು' ಎನ್ನುತ ಕೈಮುಗಿದರು.

ಪುರಂದರದಾಸರು ತಿರುಪತಿಯಲ್ಲಿ ಎಷ್ಟುದಿನ ಇದ್ದರೋ ತಿಳಿಯದು. ಆದರೆ ಅವರು ಕೆಲವು ಉತ್ಸವಗಳನು ನೋಡಿದ್ದಾರೆಂಬುವುದು ಸತ್ಯ. ಅವುಗಳಲ್ಲಿ ಬ್ರಹ್ಮೋತ್ಸವ, ಪಾರುವೇಟ, ಪಲ್ಲಕಿಸೇವೆ, ಡೋಲೋತ್ಸವಗಳನು ಹೆಸರಿಸಬಹುದು. ಸ್ವಾಮಿಗೆ ಭಾದ್ರಪದ ತಿಂಗಳಿನಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ಎರಡನೆಯದಿನ ಶೇಷವಾಹನ. ದಾಸರು ಪ್ರತಿವರುಷ ಬ್ರಹ್ಮೋತ್ಸವದಿ ಮೆರೆಯುತ...... ಚೆಲ್ವೈ ಫಣಿಯಲಿ ಶೋಭಿಸುವ ಸಿರಿವಲ್ಲಭನೆ" ಎಂದು ಶೇಷವಾಹನವನ್ನು ನೆನೆಪು ಮಾಡುತ್ತಾರೆ. ''ಶರಣ ಭಕ್ತರ ಕಾವ ಗರುಡವಾಹನ ದೇವ" ಎಂದು ಗರುಡವಾಹನವನ್ನು ಪ್ರಸ್ತಾಪಿಸಿದ್ದಾರೆ.

ಹೇಮಂತಋತು ಮಾರ್ಗಶಿರಮಾಸ ಕೃಷ್ಣಪಕ್ಷ ಷಷ್ಠಿ ತಿಥಿಯಲ್ಲಿ ಪಾರುವೇಟ ಬರುವುದು. ಸ್ವಾಮಿ ಉತ್ಸಹವಿಗ್ರಹವನ್ನು ಪಾರುವೇಟ ಮಂಟಪಕ್ಕೆ ಸೇರಿಸಿ ಅಲ್ಲಿ ಕೆಲವು ಪಕ್ಷಿಗಳನ್ನು ಆಕಾಶದಲ್ಲಿ ಹಾರಿಸುವರು. ಸ್ವಾಮಿ ಬೇಟಗೆ ಬಂದು ದುಷ್ಟ ಸತ್ವಗಳನ್ನು ಸಂಹರಿಸಿದರೆಂದು ಇಲ್ಲಿನ ಐತಿಹ್ಯ. ದಾಸವರೇಣ್ಯರು ;

"ಬೇಟೆಯಾಡುತ ಬಂದ ಸ್ವಾಮಿ
ಬೆಟ್ಟದ ಮೇಲೆ ನಿಂತ
ಬೇಟೆಯಾಡಿ ಆನಂದದಿಂದ ಬರುವವನ
ನೋಟದಿ ಬಂದು ನಿಂತಿಹನ"

ಎಂದಿರುವುದರಿಂದ ಪಾರುವೇಟ ಉತ್ಸವವನ್ನು ನೋಡಿರಬಹುದು. ಎಂದು ಹೇಳಬರುತ್ತದೆ – ಸ್ವಾಮಿಗೆ 'ವಾರಕ್ಕೆ' ಬಂದು ದಿನ ಅಭಿಷೇಕ ನಡೆಯುತ್ತದೆ. ಅದನ್ನೇ ದಾಸರು 'ವಾರವಾರಕೆ ಪೂಜೆಗೊಂಬುವ' ಎನ್ನುವ ಪಾದದಲ್ಲಿ ಹೇಳುತ್ತಾರೆ. ಸ್ವಾಮಿವೈಭವಗಳಲ್ಲಿ ಪ್ರಸಾದಗಳು ಸೇರುತ್ತವೆ.

"ಅಪ್ಪವು ಅತಿರಸ ಯೆದ್ದ ಸ್ವಾಮಿ"......
"ಬಗೆ ಬಗೆ ಭಕ್ಷ್ಯ ಪರಮಾನ್ನ ನಾನಾ
ಬಗೆಯ ಸಕಲ ಶಾಲ್ಯನ್ನ"
"ಕೇಸಕ್ಕಿ ಅನ್ನ ಉಂಬುವನ".........
"ದೋಸೆ ಅನ್ನವ ಮಾರಿಸುವನ"
"ಪರಿಪರಿಯ ಭಕ್ಷ ಪಾಯಸ ಶಾಕಶಾಲ್ಯನ್ನ
ವರರಸ ಘೃತ ಗುಡ ಕ್ಷೀರ ದಧಿಯ
ಪರಮಪುರುಷಗೆ ತಂದು''

ನೈವೇದ್ಯ ಮಾಡುತ್ತಾರಂತೆ.

ಪ್ರಸಾದಗಳ ನಂತರ ಕಾಣಿಕೆಗಳನ್ನು ಅರ್ಪಿಸುವುದನ್ನು ದಾಸರು ಅನೇಕ ಸ್ಥಳಗಳಲ್ಲಿ ಹೇಳಿದ್ದಾರೆ.

"ಕಾಶೀ ರಾಮೇಶ್ವರದಿಂದ ಅಲ್ಲಿ
ಕಾಣಿಕೆ ಬರುವುದು ಚೆಂದ"
"ತಪ್ಪು ಕಾಣಿಕೆ ಕೊಳ್ಳುವನು"
"ಬಡ್ಡಿ ಕಾಸು ಬಿಡದೆ ಹಾಗೆ
ಕೂಡಿ ಹಾಕುವನ"

ಭಕ್ತರಿಗಾಗಿ ಭಗವಂತನು ಕಾತರಿಸುತ್ತಾನೆ. ಒಂದು ದಿನ ದಾಸರು ಏಕಾಂತಸೇವೆಯನ್ನು ಮುಗಿಸಿಕೊಂಡು ಮಠಕ್ಕೆ ತಿರುಗಿದರು ಅವರಿಗೆ. ನೀರು ಬೇಕಾಯಿತು. 'ವರದಾ ನೀರು ತಾ' ಎಂದರು. (ದಾಸರ ಪುತ್ರರಲ್ಲಿ 'ವರದ' ನೊಬ್ಬನು) ಅಲ್ಲಿ ನೀರಿರಲಿಲ್ಲ. ದಾಸರ ಬಾಯರಿಕೆಯನ್ನು ದೇವರು ಅರ್ಥಮಾಡಿಕೊಂಡು ದಾಸರ ಮಗನ ವೇಷದಲ್ಲಿ ಬಂದರು. ಕೈಯಲ್ಲಿ ಬಂಗಾರದ ತಂಬಿಗೆಯಿತ್ತು. ದಾಸರು ತಂಬಿಗೆಯನ್ನು ನೋಡಿದರು, ಮಗನನ್ನು ನೋಡಿದರು, ಮಗನಿಗೆ ಧನವ್ಯಾಮೋಹವಿದೆ ಎಂದು ನಿಶ್ಚಯಿಸಿ ತಂಬಿಗೆಯಿಂದ ತಲೆಗೆ ಹೊಡೆದರು. ಮಗನು ಮಾತಾಡದೆ ಮರೆಯಾದ. ನಂತರ ನಿಜವಾದ ಮಗನು ವರದ ಅಲ್ಲಿಗೆ ಬಂದನು. ದಾಸರಿಗೆ ಎಲ್ಲಾವಿಷಯವು ಗೊತ್ತಾಯಿತು. ದಾಸರು ದಿಗ್ಭ್ರಾಂತರಾದರು. ಕ್ಷಮಿಸಬೇಕೆಂದು ದೈವವನ್ನು ಬೇಡಿದರು.

''ಜಗದಯ್ಯ ಎನ್ನಯ್ಯ ಕಾಯಯ್ಯ
ಪಂಡರಿರಾಯ
ಸಣ್ಣವನೆಂದು ನಾ ನೀರು ತಾ ಎಂದರೆ
ಎನ್ನ ವಂಚಿಸಿ ನೀನು ರಾತ್ರಿಯಲ್ಲಿ
ಚಿನ್ನದ ಕಲಶದಿ ಜಲ ತಂದು ಕೊಟ್ಟರೆ
ನಿನ್ನಂದು ಕುಕ್ಕಿದಕ್ಕೀಗ ಪಂಡರಿರಾಯ"

ಎಂದು ದಾಸರು ಹಾಡಿದರು. ದಾಸರು ತಿರುಪತಿಯನ್ನು ಬಿಟ್ಟರೂ ಅವರಿಗೆ ಶ್ರೀನಿವಾಸನ ನೆನಪು ಇದ್ದೇ ಇದ್ದಿತು. ಆದ್ದರಿಂದ 'ಶ್ರೀನಿವಾಸ' ನಾಮವನು ಕೀರ್ತನೆಗಳಲ್ಲಿ ಬಹಳವಾಗಿ ಹಾಡಿದ್ದಾರೆ.

''ಶ್ರೀನಿವಾಸ ನೀನೇ ಪಾಲಿಸೋ
ಶ್ರಿತಜನಪಾಲಾ.........
ತನುವಿನಲ್ಲಿ ಬಲವಿಲ್ಲ ನೆನೆದ ಮಾತ್ರ ಸಲಹುವ
ಹನುಮಧೀಶ ಪುರಂದರವಿಠಲ ನೀ ಎನಗೆ
ಒಲಿದು"

''ವಾಸುಕಿ ಶಯನ ಎನ್ನ
ದೋಷವ ಪರಿಹರಿಸೋ ಇನ್ನು
ದಾಸ್ಯವಿತ್ತು ನೋಡೋ ಅಂಜನಾ
ದ್ರೀಶ ಶ್ರೀನಿವಾಸ ನಿನಗೆ ಏಕೆ ದಯ
ಬಾರದೋ"

ದಾಸರು ಶ್ರೀನಿವಾಸನ ಭಕ್ತರೇ. ಕೋನೇರಿ ತೀರ್ಥಾಧಿವಾಸನನ್ನು ಸೇವಿಸಿದವರೇ. ಆದರೆ ಅವರು ಬಾಹ್ಯವೇಷಕ್ಕೆ ಪ್ರಾಧಾನ್ಯ ನೀಡಿಲ್ಲ

''ಹಣವಿಗೆ ಹಾರೈಸಿಕೊಂಡು
ತಿರುಪತಿಗೋಹರ ಕಂಡು
ಹಣಕಾಸು ಕೊಂಡು ಬಂದು
ಸ್ವಾಮಿಯ ನೋಡುವವಗೆ
ನೆಚ್ಚನಯ್ಯ ಹರಿ ಮೆಚ್ಚನಯ್ಯ

ಎಂದು ತಿರಸ್ಕಾರ ಮಾಡುತ್ತಾರೆ.

''ಮನವೆಂಬ ಮಂಟಪ" ನಿರ್ಮಿಸಿ "ತನ್ನ ತನುವುನೊಪ್ಪಿಸಿ" ಕೈಯ್ಯ ಮುಗಿದ ದಾಸರ ಜೊತೆಯಲ್ಲಿ ನಾವೂ ವೆಂಕಟರಮಣನನ್ನು ನೋಡೋಣ ಬನ್ನಿ ★

# ಸೂಳ್ನುಡಿ

ಶಿವನ ಸ್ತುತಿಪರವಾದ ವಚನಗಳನ್ನು 'ಸೂಳ್ನುಡಿ' ಎಂದು ಕರೆಯುತ್ತಾರೆ. ಇವುಗಳನ್ನು ಈ ಹಿಂದೆ ಶಿವದೇವಾಲಯಗಳಲ್ಲಿ ಭಜನೆಯ ರೀತಿಯಲ್ಲಿ ಒಬ್ಬರಾದ ಮೇಲೆ ಒಬ್ಬರು ಹಾಡುತ್ತಿದ್ದರಿಂದ 'ಸೂಳ್ನುಡಿ'ಎನ್ನುವ ಹೆಸರು ಬಂದಿರಬೇಕು. 'ಸೂಳ್'' ಎಂದರೆ ಸರದಿ, 'ನುಡಿ' ಎಂದರೆ ಮಾತು ಅಂದರೆ 'ಸರದಿಯಮಾತು' ಎನ್ನುವ ಅರ್ಥ ಇದಕ್ಕುಂಟು. ಈ ಉಪನಿಷತ್ತುಗಳಲ್ಲಿರುವುದೆಲ್ಲವೂ ಕನ್ನಡದ ಈ ಸೂಳ್ನುಡಿ ಗಳಲ್ಲಿವೆ.

ಒಡಲುಗೊಂಡವನೆಂದು ಭಗವಂತನು ನಮ್ಮನ್ನು ಜರಿಯಬಹುದು. ಆದರೇನು ಪ್ರಾಣದ ಅಸ್ತಿತ್ವ ಒಡಲಿನಲ್ಲಿರುವುದು. ಈ ದೇಹ "ಎಲುರಕ್ತ ಮಾಂಸಗಳ ಮೇಲೆ ಚರ್ಮದ ಹೊದಿಕೆ," "ಸೋರುವದೊಂಭತ್ತು ಬಾಗಿಲು ಮಲದೊಳು, ನೀರಿಲ್ಲದಿದ್ದರೆ ನಾರುವ ದೇಹ, ಹಿಗ್ಗುವ, ತಗ್ಗುವ ಮುಗ್ಗುವ, ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧಾಗೋ ದೇಹಕೆ ಹಿಗ್ಗುವೆ ಯೇಕೋ?'' "ಹಲವು ವ್ಯಾಧಿಯ ಬೀಡು, ಎತ್ತಿದ ಕಸಕಿಂತ ಕಡೆಯಾಗುದೀ ದೇಹವು ನಿತ್ಯವಲ್ಲ" "ಕೂಳಿನ ಬಲದಲಿ ಬೆಳೆದ ಕಾಯದ ಬಾಳುವೆಯು ಸ್ಥಿರವಲ್ಲ'', "ಕುತ್ತದ ಪರಿವರಿ ಪಾಪದ ಬಿತ್ತು ಪರಾಭವದ ಬೆಳೆಸು, ಪಸಿದ ಕೃತಾಂತಗೆತ್ತಿದ ಭೋಗಂತನು'', "ಅಂಗವ ನೋಡಲೆಲು ರಕ್ತ ಮಾಂಸ ಚರ್ಮದ ಬೊಂಬುಳಿಯಲ್ಲದೇನಂಟು "ಅಂಗ ಬೇರಾತ್ಮಬೇರೆಂದು'', ''ದೇಹಮಾತ್ಮಂ ಬಿಟ್ಟು ಪಿಂಗದನ್ನಂ ಶುಚಿಯೇ''-ಎಂದು ಅನೇಕ ಕವಿಗಳು ತತ್ತ್ವಜ್ಞಾನಿಗಳು, ಜ್ಞಾನಿಗಳು, ವಿರಾಗಿಗಳು ಬೀಳುವ ಮರದಲ್ಲಿ ಉಯ್ಯಾಲೆಯಾಡುವುದು ಎಷ್ಟು ಮೂರ್ಖತನವೋ ಅಷ್ಟೇ ಮೂರ್ಖತನ ಬಿದ್ದು ಹೋಗುವ ಈ ದೇಹದಲ್ಲಿ ನೆಚ್ಚಿಗೆ ಇಟ್ಟು ಬಾಳುವುದು ಎಂದು ಹೇಳಿರುವರು. ಮೇಲೆ ಹೇಳಿದಂತೆ ನಶ್ವರ ದೇಹಕ್ಕೆ ಹುಟ್ಟು, ಸಾವು ಇಲ್ಲವೆಂದಲ್ಲ, ಇದೆ. ಆದರೆ ಆತ್ಮಕ್ಕಿಲ್ಲ. ಆದರೆ ಅಮರವಾದ ಆತ್ಮ ಅಸ್ತಿತ್ವಕ್ಕೆ ಬರುವುದು ಈ ದೇಹದಿಂದ "ದೇಹಮಿದಂಖಲು ಧರ್ಮಸಾಧನಂ'' ಎಂದಿದ್ದಾರೆ, ಬಲ್ಲವರು. ವ್ಯವಹರಿಸ ಬೇಕಾದರೆ, ಯೋಗ ಸಾಧಿಸಬೇಕಾದರೆ, ಮೋಕ್ಷ ಪಡೆಯಬೇಕಾದರೆ, ಭಗವಂತನ ಸೇವೆ ಮಾಡಬೇಕಾದರೆ ಈದೇಹವೇ ಪರಮೋಪಾಯ ಮತ್ತು ಪ್ರಬಲಸಾಧನ ಸಂಪತ್ತು ಆಗಿರುವುದು. ಅಂದರೆ ದೈವೀ ಶಕ್ತಿಯ ಅವತರಣಕ್ಕೆ ಈ ದೇಹ ಸಶಕ್ತವಾಗಿರಬೇಕು ಎಂದೇ ಸಾಧನ ಪೂರ್ತಿಗಾಗಿ ಮಾನವ ದೇಹದ ಮಹತ್ತ್ವ ಅಪಾರವಾದುದು. "ಮಾನವ ಜನ್ಮ ದೊಡ್ಡದು ಇದು ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ" ದಾಸರವಾಣಿ ಎಚ್ಚರಿಸುತ್ತಿರುವುದು; ಕ್ಷಣ ಕ್ಷಣಕ್ಕೂ. ಹಸಿವು ಎನ್ನುವ ಬಕಾಸುರ ಮನುಷ್ಯನನ್ನು ನಾನಾ ವಿಷಯಗಳಿಗೆ ಎಳಸುತ್ತಾನೆ. ಅದಕ್ಕಾಗಿ ಮನುಷ್ಯನು ತಪ್ಪುಮಾಡುತ್ತಾನೆ. ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತಾನೆ? ಮೇಲಾಗಿ ಉಪನಿಷತ್ತಿನ ಋಷಿಗಳು 'ಅನ್ನ'ವನ್ನು "ಬ್ರಹ್ಮ" ವೆಂದು ಕರೆದೂ ಇದ್ದಾರೆ. ದೇಹಧಾರಣೆ ಮಾಡಿ ದಮೇಲೆ ದೇಹ ಧರ್ಮಗಳಿಗೆ ಬದ್ಧವಾಗಲೇ ಬೇಕು. ಪರಮಾತ್ಮನನ್ನು ತಿಳಿಯಲು ಈ ದೇಹ ನೆಟ್ಟಗೆ ಇದ್ದರೇಯೇ ಸಾಧ್ಯವಾಗುವುದು. "ಅನೇಕ ಗುಣಯುಕ್ತಸ್ಯ ಕಾಯಸ್ಸೈಕೋ ಮಹಾನಗುಣಃ ಯೋ ಯಥಾವರ್ತಯತ್ಯೇನಂ ತಂಸ್ತ ಥೈವಾನುವರ್ತತೇ" ಎಂದು ಜ್ಞಾನಿಗಳು ದೇಹಗುಣವನ್ನು ಪ್ರಶಂಸಿದ್ದಾರೆ. ಈ ಎಲ್ಲ ಕಾರಣಗಳಿಂದ ಮನುಷ್ಯನು ತಪ್ಪುಮಾಡಿದರೂ ಭಗವಂತನ ತನ್ನನ್ನು ಕ್ಷಮಿಸಬೇಕು. ಏಕೆಂದರೆ ದೇವರು ಒಬ್ಬ ವ್ಯಕ್ತಿಯಲ್ಲ ನಿಜ. ಆದರೆ ಅವನು ಮನುಷ್ಯ ದೇಹವನ್ನು ಧರಿಸಿ ಭೂಮಿಯಲ್ಲಿ ಅವತರಿಸುವನೆಂದು ಹೇಳಿದೆ. ಅಷ್ಟೇ ಅಲ್ಲದೆ ಭಕ್ತಾನುಗ್ರಹಕ್ಕಾಗಿ ಭಗವಂತನು ಒಂದು ದಿವ್ಯ ಆಕಾರದಿಂದಲೇ ಕಾಣಿಸಿಕೊಳ್ಳಬೇಕಾಗಿದೆ. ಹಾಗಾದಾಗ ಈ ಮೃಣ್ಮಯ ಶರೀರದಲ್ಲಿ, ದೇಹದ ಸುಖದುಃಖಗಳಿಗೆ ಗುರಿಯಾಗದಿರಲು ಸಾಧ್ಯವಿಲ್ಲ. ಆಗ ಹಸಿದವನ ಅನುಭವ ಅವನಿಗೆ ಬರುವುದುಂಟು. ಅನ್ನ ವಿಲ್ಲದಿದ್ದರೆ ಯಾವ ಆಟವೂ ನಡೆಯದು. ಪ್ರಾಣ ಒಣಗುತ್ತದೆ. ಎಂದೇ ಮಾನವನು ತಪ್ಪುಮಾಡುವ ಸ್ವಭಾವ ಹೊಂದಿದ್ದಾನೆ. ಆದರೆ ಅದನ್ನು ಕ್ಷಮಿಸಬೇಕಾದುದು ಭಗವಂತನ ಕಾರ್ಯ. ಆದನ್ನು ಬಿಟ್ಟು "ಒಡಲುಗೊಂಡವನು ಹಸಿಯುವನು, ಒಡಲುಗೊಂಡವನು ಹುಸಿ (ಸುಳ್ಳು) ಯುವನು, ಒಮ್ಮೆಯಾದರೂ ನನ್ನನ್ನು ಒಡಲುಗೊಂಡವನೆಂದು ಜರಿದು ನುಡಿಯಬೇಡ. ನೀನು ನನ್ನಂತೆ ಒಮ್ಮೆ ಒಡಲುಗೊಂಡು ನೋಡು" ಎಂದು ದೇವರ ದಾಸಿಮಯ್ಯ ದೇವರಿಗೆ ಸವಾಲುಹಾಕಿದ್ದಾನೆ, ದಯಾಭರಿತನಾಗಿ ನಮ್ಮನ್ನು ಕ್ಷಮಿಸಬೇಕೆಂದು ಭಗವಂತದಲ್ಲಿ ಬೇಡಿ ಕೊಂಡಿದ್ದಾನೆ.

ಭಕ್ತನು ವಿಷಯವಾಸನೆಗಳ ಕಡೆಗೆ ಹರಿಯುವ ಮನಸ್ಸನ್ನು ತನ್ನ ಅಧೀನದಲ್ಲಿ ನಿಯಂತ್ರಣದಲ್ಲಿಟ್ಟು ಕೊಳ್ಳಬೇಕು. ಮನಸ್ಸಿನಲ್ಲಿ ಧೃಡತೆ ಇರಬೇಕು. ಎನ್ನುವುದು ಭಕ್ತನ ದಂಡಕವಾಗ ಬೇಕು ಹರಿದಾಡುವ ಮನಸ್ಸನ್ನು ಹಿಡಿದು ಒಂದೆಡೆ ನಿಲ್ಲಿಸುವುದು ಬಲು ಕಷ್ಟ. ಹಾಗೇನಾದರೂ ಅತ್ತಲಿತ್ತ ಹರಿವ ಮನಸ್ಸಿನ ಶಿರವನ್ನು ಅರಿದಡೆ ಅಕ್ಕಮಹಾದೇವಿ ಹೇಳುವಂತೆ ಬಚ್ಚಬರಿಯ ಬಯಲು ಎಂದೂ ಮನಸ್ಸಿನ ಮರ್ಕಟಬುದ್ಧಿಗೆ ಗುಲಾಮನಾಗಬಾರದು. ಮೈಬತ್ತಲೆಮಾಡಿ ಆದರ ವಶದಲ್ಲಿದ್ದರೆ ಏನೂ ಪ್ರಯೊಜನವಿಲ್ಲ. ಕೆನೆ ಇಲ್ಲದ ಮೊಸರನ್ನು ಎಷ್ಟ ಕಡೆದರೂ ಬೆಣ್ಣೆ ಬರುವುದಿಲ್ಲ. ಆದರಿಂದ ತುಪ್ಪ ಆಗುವುದಿಲ್ಲ. ಆದ್ದರಿಂದ ಅಂತಹ ಮೊಸರನ್ನು ಕಡೆಯುವುದು ನಿಷ್ಪ್ರಯೋಜನ. ಎಂದ ಮೇಲೆ ಇನ್ನು ನೀರನ್ನು ಕಡೆದರೆ ಮೊಸರು ಬರುವುದುಂಟೇ? ಹಾಗೆಯೇ ತನ್ನ ನಿಯಂತ್ರಣದಲ್ಲಿಲ್ಲದ ಮನಸ್ಸನ್ನು ಪಡೆದ ಮಾನವನ ಬಾಳು ಎಷ್ಟು ಕಾಲವಿದ್ದರೂ ಲಾಭವಿಲ್ಲವೆಂದು "ಮನಸ್ಸು ತಾನು ಹರಿದ ಕಡೆ ಹರಿಯುತ್ತಿರಬೇಕಾದರೆ ತನು ತನ್ನ ದೆಸೆಯಲ್ಲಿ ಎಷ್ಟುದಿನ ವಿದ್ದರೇನು? ಕೆನೆಯಿಲ್ಲದ ಮೊಸರನ್ನು ಕಡೆದರೆ ಅಲ್ಲಿ ಒಂದು ಹನಿ

**ಕೆ.ಎಂ. ಅಚ್ಯುತಕುಮಾರ ಎಂ.ಎ;**

ತುಪ್ಪವಿಲ್ಲ ಕಾಣಾ ರಾಮನಾಥ" ಎಂದು ಹೇಳಿರುತ್ತಾನೆ. ಅಂದರೆ ಮನೋಜಯವಾಗದ ಹೊರತು ದೇಹ ಎಷ್ಟು ಕಾಲವಿದ್ದರೂ ಲಾಭವಿಲ್ಲವೆನ್ನುವುದು ಅವನ ಅಭಿಪ್ರಾಯ. ದೇಹ ಇಲ್ಲಿದ್ದರೂ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಬೇಕೆನ್ನುವ ದಿವ್ಯಭವ್ಯ ಬೋಧನೆ ಇಲ್ಲಿದೆ.

ನೀರ್ಗುಳ್ಳೆ, ಸಮುದ್ರದಲ್ಲಿ ಹುಟ್ಟುತ್ತದೆ. ಅದು ಕೊನೆಗೆ ಸಮುದ್ರದಲ್ಲಿಯೇ ಅಡಗುತ್ತದೆ. ಚಿನ್ನದಿಂದ ಹಲವು ಆಭರಣಗಳಾಗುತ್ತವೆ. ಅವುಗಳನ್ನು ಕರಗಿಸಿದರೆ ಮತ್ತೆ ಚಿನ್ನವೇ ಆಗುತ್ತದೆ. ವಾರಿಕಲ್ಲು ಅಂದರೆ ಮಂಜುಗಡ್ಡೆ ನೀರಿನಿಂದಾಗುತ್ತದೆ. ಅದನ್ನು ಕರಗಿಸಿದರೆ ಅದು ಮತ್ತೆ ನೀರಾಗುತ್ತದೆ. ಆಕಾಶದಲ್ಲಿ ಇಂದ್ರಚಾಪ (ಕಾಮನಬಿಲ್ಲು) ಕಾಣಿಸಿಕೊಳ್ಳುತ್ತದೆ. ಅದು ಅದು ಅಡಗುವುದಕ್ಕೆ ಆಕಾರವೇ ಆಶ್ರಯವಾಗಿದೆ; ಮತ್ತೆ ಗಾಳಿಯಿಂದ ತೋರಿದ ಸುಳಿಗಾಳಿ ಅಡಗುವುದಕ್ಕೆ ಗಾಳಿಯೇ ಆಶ್ರಯವಲ್ಲದೆ ಮತ್ತೆ ಬೇರೆ ಆಶ್ರಯವಿಲ್ಲ. ಅದೇ ರೀತಿಯಾಗಿ ಮನುಷ್ಯನೂ ಕೂಡಾ ಪರಮಾರ್ಥನೆಂಬ ಅಂಬುಧಿಯಲ್ಲಿ ಹುಟ್ಟು

ತ್ತಾನೆ. ಅವನು ಕೊನೆಗೆ ಅಲ್ಲಿಯೇ ಅಡಗುವನು; ಅಡಗುವಂತಾಗಬೇಕು. ಇದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ. ಹೀಗೆ ಮನುಷ್ಯನು (ಆತ್ಮ) ಪರಮಾತ್ಮನಲ್ಲಿ ಐಕ್ಯವಾಗುವ ಕಾಲಕ್ಕೆ ಹೊರಗಿನ ತೋರಿಕೆಯ ದೇಹ ಹೊರಟು ಹೋಗುವುದು. ಆದರೆ ಶಾಶ್ವತವಾದ ಆತ್ಮ ಪರಮಾತ್ಮನಲ್ಲಿ ಅಡಗುತ್ತದೆ. ಆದ್ದರಿಂದ ನಾವು ದೇಹಿಗಳಾಗಿದ್ದರೂ ಪರವಾಗಿಲ್ಲ, ದೇಹ ಪಡೆದವನೆಂದು,ಅದಕ್ಕಾಗಿಯೇ ಹಗೆಯಾದವನೆಂದು ತಿರಸ್ಕರಿಸಬೇಡವೆಂದು ಭಗವಂತನಲ್ಲಿ "ಒಡಲುಗೊಂಡೆನಾಗಿ ಮೃಡನೆ ನಿನಗೆ ಹಗೆಯಾದೆನು. ನಾನು ಒಡಲುಗೊಂಡಿದ್ದರೆ ತಾನೆ ಏನು ? ಕಡಲಿನಲ್ಲಿದ್ದ ನೀರ್ಗುಳ್ಳೆ ಕಡಲಿನಲ್ಲಿಯೇ ಅಡಗುವಂತೆ ನನ್ನ ಒಡಲಳಿದು ಹೋದರೇನು ? ಪ್ರಾಣ ನಿಮ್ಮಲ್ಲಿ ಅಡಗುವುದು" ಎಂದು ದೇವರ ದಾಸಿಮಯ್ಯ ಬೇಡುತ್ತಾ ಸೃಷ್ಟಿ ಮತ್ತು ಸೃಷ್ಟಿಕರ್ತನ ಸಂಬಂಧ ಎಂತಹುದು ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

"ಘಟವನ್ನು ಒಡೆದು (ಮಣ್ಣಿನಿಂದ ಮಾಡಿದ ಮಡಕೆ ಮೊದಲಾದುವು) ಬಯಲ (ಶೂನ್ಯ, ಇದನ್ನೇ ಪರವಸ್ತು ಎನ್ನುತ್ತೇವೆ) ನೋಡುವುದೇಕೆ ? ಆ ಘಟದೊಳಗಿರುವುದೇ ಬಯಲು ಎಂದರಿದರೆ ಸಾಕಲ್ಲವೆ ? ಪಟವನ್ನು (ಬಟ್ಟೆಯನ್ನು) ಹರಿದು ತಂತು (ನೂಲು, ಎಳೆ) ವನ್ನು ನೋಡುವುದೇಕೆ ? ಆ ಬಟ್ಟೆಯೇ ನೂಲು ಎಂದರಿದರೆ ಸಾಲದೆ ? ಬಳೆಯನ್ನು ಮುರಿದು ಕಾಂಚನವನ್ನು ನೋಡುವುದೇಕೆ ? ಆ ಬಳೆಯೆ ಚಿನ್ನವೆಂದರಿದರೆ ಸಾಲದೆ?" ಎಂದು ದಾಸಿಮಯ್ಯ ತನ್ನಿಂದಲೇ ಭಗವಂತನನ್ನು ಅರಿಯಬೇಕೆಂದಿದ್ದಾನೆ. ಜಗತ್ತಿನಲ್ಲಿ ನಾನಾ ರೂಪಗಳಿರುವ ವಸ್ತುಗಳಿವೆ. ಆದರೆ ಅವುಗಳಿಗೆ ಮೂಲವಾಗಿರುವವನು ಆ ಪರಮಾತ್ಮನೊಬ್ಬನೆ.ಆ ಸರ್ವೇಶ್ವರನೇ ಸರ್ವಭೂತಗಳಲ್ಲಿ (ಚರ ಮತ್ತು ಜಡವಸ್ತುಗಳಲ್ಲಿ) ಸ್ಥಿತನಾಗಿರುವವನು. ಅವನು ಒಬ್ಬನೇ ಆಗಿದ್ದರೂ ಪ್ರತಿಯೊಂದು ವಸ್ತುವಿನಲ್ಲೂ ಆ ವಸ್ತುವಿನ ರೂಪ ತಳೆದಿರುತ್ತಾನೆ. ಇರುವುದು ಒಂದೇ ಚಿನ್ನವೆಂಬ ವಸ್ತು (ಲೋಹ). ಆ ವಸ್ತುವಿನಿಂದ ತರತರದ ಆಭರಣಗಳು ಆಗಿರುತ್ತವೆ. ಇರುವುದು ಒಂದೇ ಆದರೂ ಅದು ಗಡಿಗೆ, ಹಡಿ ಇವೇ ಮೊದಲಾದ ಆಕಾರಗಳುಳ್ಳ ವಸ್ತುಗಳಲ್ಲಿ ಕೂಡಿಕೊಂಡು ಆಕಾರಕ್ಕೆ ತಕ್ಕಂತೆ ಸಣ್ಣದು, ದೊಡ್ಡದು ಆಗಿರುತ್ತದೆ. ಒಂದೇ ಎಳೆ (ನೂಲು) ಇರುವುದು. ಆದರೂ ಅದರಿಂದ ನಾನಾ ಬಗೆಯ ಬಣ್ಣ ಬಣ್ಣದ ಬಟ್ಟೆಗಳು ತಯಾರಾಗುತ್ತವೆ. ಹೀಗೆಯೇ ಇರುವುದು ಒಂದೇ ಪರಬ್ರಹ್ಮ ಅಥವಾ ಪರವಸ್ತು. ಹೀಗೆಯೇ ನಾನಾ ವಿಧವಾದ ಪದಾರ್ಥಗಳು ಜಗತ್ತಿನಲ್ಲಿ ಆಗಿರುತ್ತವೆ. ಕಾಂಚನವನ್ನು ಅರಿಯದೇಕೆಂದರೆ ಆಭರಣವನ್ನು ಮುರಿಯಬೇಕಿಲ್ಲ. ಅದು ಚಿನ್ನದಿಂದಾದುದು, ಚಿನ್ನ ಎಂದು ಅರಿತರೆ ಸಾಕು. ಅಂತೆಯೇ ತಂತುವನ್ನು ಕೂಡಾ ಅದೇ ರೀತಿ ತನ್ನನ್ನು ಅರಿಯಬೇಕಾದರೆ ತನ್ನನ್ನು ನಾಶಮಾಡಿಕೊಳ್ಳುವ ಆವಶ್ಯಕತೆ ಇಲ್ಲ. ತಾನೇ ಪರಬ್ರಹ್ಮ ವಸ್ತುವೆಂದು ತಿಳಿದರೆ ಸಾಕು. ಜಗತ್ತಿನಲ್ಲಿ ನಾನಾ ವಿಧ, ರೂಪಗಳು ಇದರಲ್ಲಿ ಅದರಲ್ಲಿ ಪರಮಾತ್ಮನು ಅಂತಸ್ಥನಾಗಿದ್ದಾನೆ. ಅವುಗಳ ಅರಿವಿನಿಂದಲೇ ಪರಮಾತ್ಮನ ಸ್ವರೂಪವನ್ನು ತಿಳಿಯಬಹುದು. ತನ್ನನ್ನು ನಷ್ಟಗೊಳಿಸಿಕೊಂಡು ಪರಮಾತ್ಮನನ್ನು ಅರಿಯಬೇಕಾಗಿಲ್ಲ.

ಮಣ್ಣಿನಿಂದ ಮಾಡಿದ ಕೊಡ ಮೊದಲಾದುವು ಮಣ್ಣಿನಿಂದ ಬೇರೆ ಅಲ್ಲ. ಹಾಗೆಯೇ ಶಿವನಿಂದ ಭಿನ್ನವಲ್ಲ. ಸಮುದ್ರದಿಂದ ಹುಟ್ಟಿದ ನೊರೆ, ತೆರೆ, ಗುಳ್ಳೆಗಳು ಸಮುದ್ರದಿಂದ ಬೇರೆ ಅಲ್ಲ. ಹಾಗೆ ಹಾಗೆ ಶಿವತತ್ತ್ವದಿಂದ ಹುಟ್ಟಿದ ಈ ಪ್ರಪಂಚ ಶಿವನಿಂದ ಭಿನ್ನವಾದುದಲ್ಲ.

"ಯಥಾ ತಂತುಭಿರುತ್ಪನ್ನಃ ಪಟಸ್ತಂತು-
ಮಯಃ ಸ್ಮೃತಃ
ತಥಾ ಶಿವಾತ್ಸಮುತ್ಪನ್ನಂ ಶಿವ ಏವ
ಚರಾಚರಂ ॥"
"ಆತ್ಮಶಕ್ತಿವಿಕಾಸೇ ನ ಶಿವೋ ವಿಶ್ವಾತ್ಮನಾ
ಸ್ಥಿತಃ
ಕುಟೀ ಬಾವಾದ್ಯಥಾ ಭಾತಿಪಟಃ
ಸ್ವಸ್ಯಪ್ರಸಾರಣಾತ್"

ಅಂದರೆ ತಂತುಗಳಿಂದ ಉತ್ಪನ್ನವಾದ ಪಟವು ಹೇಗೆ ತಂತು ಸ್ವರೂಪವಾಗಿರುವುದೋ, ವಸ್ತ್ರವು ತನ್ನ ಪ್ರಸಾರಣದಿಂದ ಡೇರೆ ಆಗಿ ಹೇಗೆ ತೋರುವುದೋ ಹಾಗೆ ಶಿವನು ಈ ಲೋಕದಲ್ಲಿ. ಈ ಜನ್ಮದಲ್ಲಿ ಈ ದೇಹದಲ್ಲಿ ಪರಶಿವನನ್ನರಿಯಬೇಕೆನ್ನುವುದು ಇಲ್ಲಿನ ಅರ್ಥ.

ಮಾನವನು ಭಗವಂತನ ಭಕ್ತನಾಗಿರಬೇಕು. ಆ ಭಕ್ತನು ವಿನಯಶೀಲನೂ, ಕಿಂಕರನೂ, ದಾಸನೂ ಆಗಿರಬೇಕು. ಹಮ್ಮು, ಬಿಮ್ಮು ಭಕ್ತನಿಗೆ ಸಲ್ಲದು. ಅಹಂಕಾರಕ್ಕೆ ಕಾರಣವಾದ ಎಲ್ಲ ಪದವಿಗಳ ಆಸೆ ಹೋಗಬೇಕು. ಇವುಗಳೆಲ್ಲದರ ಸಾಕಾರಮೂರ್ತಿಯಾಗಿ 'ಭಕ್ತಿ ಭಂಡಾರಿ' ಹೇಗೋ ಹಾಗೆ 'ವಿನಯ ಭಂಡಾರಿ'ಯೂ ಆಗಿದ್ದರು ; ಅಣ್ಣನವರು. ಆದ್ದರಿಂದ "ಆಡ್ಡದೊಡ್ಡ ನಾನಲ್ಲಯ್ಯ, ದೊಡ್ಡ ಬಸಿರು ಎನಗಿಲ್ಲವಯ್ಯ. ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರು. ಹಡೆದು ತಿನ್ನುವ ಸೂಳೆಯಂತೆ ಧನವುಳ್ಳವರನರಸಿ ಅರಸಿ ಬೋಧಿಸಲು, ಪ್ರಾರ್ಥಿಸಲು ನನಗೆ ಗೊತ್ತಿಲ್ಲ. ದೊಡ್ಡ ತನುವು ನನ್ನಲ್ಲಿ ಇಲ್ಲ. ನಿಮ್ಮ ಪ್ರಮಥರಿಗೆ ಅಂಜುವೆನು. ಅನಾಥ ನಾನಯ್ಯ ಕೂಡಲಸಂಗಮದೇವ" ಎಂದು ಅಣ್ಣನವರು ಹೇಳಿಕೊಂಡಿರುವರು. "ಸಮವಿನಯವೇ ಸದಾಶಿವನ ಒಲುಮೆ," "ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ", "ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು" "ಬ್ರಹ್ಮಪದವಿ ಬೇಡ, ರುದ್ರಪದವಿ ಬೇಡ, ವಿಷ್ಣುಪದವಿ ಬೇಡ. ಮತ್ತಾವ ಪದವಿಯೂ ಬೇಡ. ಸದ್ಭಕ್ತರ ಪಾದನರಿದಿಪ್ಪ ಮಹಾ ಪದವಿ ನೀಡು" ಎಂದು ನಡೆದು ನುಡಿದು ಪ್ರಾರ್ಥಿಸಿರುವವರು ಅಣ್ಣನವರಲ್ಲವೆ ? ಅಣ್ಣನವರು ದೊಡ್ಡ ಹೊಟ್ಟೆಯವರಂತೆ (ಶ್ರೀಮಂತರಂತೆ) ನಿಷ್ಕರುಣಿಗಳಾಗಿರಲಿಲ್ಲ.

"ನಾನು ಮಾಡುತ್ತೇನೆ" ಎನ್ನುವ ಮನದ ಅಹಂಕಾರ ಭಕ್ತರಿಗೆ ಸಲ್ಲದು. ಪರಮಾತ್ಮನು ನಮ್ಮಿಂದ ದೈನಂದಿನ ಕೆಲಸವನ್ನು ಮಾಡಿಸುತ್ತಿದ್ದಾನೆ. ಅದನ್ನು ತಾನೇ ಮಾಡುತ್ತಿರುವೆನೆಂದು ತಿಳಿಯುವುದು ಮಹಾಪಾಪ. ಅದು ಮನದಲ್ಲಿ ಹೊಳೆಯಲೂ ಬಾರದು. ಸಂಪತ್ತು ಸರ್ವಸ್ವ ಭಗವಂತನಿಗೆ ಸೇರಿದ್ದು. ಧನಿಕರೆಂದರೆ ಅದಕ್ಕೆ ನಾವು ನ್ಯಾಸವಷ್ಟೆ (ಶ್ರೀ ಅರವಿಂದರ ಮಾತು) ದಾಸಿಮಯ ಹೇಳುವ ಹಾಗೆ "ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ (ದೇವರ) ದಾನ" ಆಗಿದೆ. ಆದ್ದರಿಂದ ಈ ಸಂಪತ್ತಿನ ಅಧಿಕಾರಿ ಮತ್ತು ಭೋಕ್ತೃ ಭಗವಂತನೇ ಆಗಿದ್ದಾನೆ. 'ಉಡುವಲ್ಲಿ ಉಂಡುವಲ್ಲಿ ನಾನೆಂಬ ಭಾವವಳಿದು, ಮಾಡುವವನೂ, ನೀಡುವವನೂ ನಾನಲ್ಲವೆಂಬ ಭಾವನೆ ತಲೆದೋರಬೇಕು. 'ನಿಮ್ಮ ಸೊಮ್ಮು ನಿಮಗೆ ಸಲ್ಲಿಸುವೆನು' ಎನ್ನುವ ಅರ್ಪಣಭಾವವಿರಬೇಕು. ಅದು ಬಿಟ್ಟು ಕೊಟ್ಟವನ ಮುಂದೆ ತನ್ನದೆಂದು ತಪ್ಪಾಗಿ ತಿಳಿದು ನಾನು ಕೊಡುತ್ತಿದ್ದೇನೆನ್ನುವುದು, ಪ್ರತಿಷ್ಠೆಯನ್ನು ಮೆರೆಯುವುದು ಅವಿವೇಕ. ಹಾಗಾಗದೆ ಹೋದರೆ ಅದು ವಿಪರೀತ ಬುದ್ಧಿ. "ನಿಮಗೆ ಮಾಡಿದೆನೆಂದು ನುಡಿದು ಕೆಟ್ಟ ಕೇಡಿಂಗೆ ಕಡೆಯಿಲ್ಲ." ಮಾಡುವವನೂ, ಮಾಡಿಸಿಕೊಳ್ಳುವವನೂ ಪರಮಾತ್ಮನೇ ಆಗಿರುವನೆಂಬ ಭಾವ ಮನವರಿಕೆಯಾಗಿ ಅಕ್ಕನವರು ಹೀಗೆ ಹೇಳಿದರು : "ಮಾಡುವಾತ ನಾನಲ್ಲ. ನೀಡುವಾತ ನಾನಲ್ಲ. ಬೇಡುವಾತ ನಾನಲ್ಲ. ನಿಮ್ಮ ಕಾರುಣ್ಯವನ್ನು ಬಿಟ್ಟು ಬೇರೇನೂ ಕೇಳವಲ್ಲ. ಮನೆಯ ತೊತ್ತು ಅಲಸಿದರೆ ಒಡತಿ ಮಾಡಿಕೊಳ್ಳುವಂತೆ ನಿನಗೆ ನೀನು ಮಾಡಿಕೋ" ಎಂದು ಭಗವಂತನಲ್ಲಿ ಮೊರೆಯಿಟ್ಟು ಶರಣಾಗಿದ್ದಾರೆ.

ಇನ್ನೊಂದೆಡೆ "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ. ಮಾಡಿದೆನೆನ್ನದಿರಾ ಲಿಂಗಕ್ಕೆ. ಮಾಡಿದೆನೆನ್ನದಿರಾ ಜಂಗಮಕ್ಕೆ. ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ್ದನೀವನು ಕೂಡಲಸಂಗಮದೇವ" ಎಂದಿರುವರು. ಬಸವಣ್ಣ ಭಕ್ತನಲ್ಲಿರಬೇಕಾದ ಮೊದಲ ಗುಣವೆಂದರೆ ನಾನು ಮಾಡಿದೆನೆಂದು ಕೊಚ್ಚಿಕೊಳ್ಳುವ ಅಹಂಕಾರದ ಗೋಡೆಯನ್ನು ನಾಶ ಮಾಡುವುದು ಮತ್ತು ಅದರ ಪಿಶಾಚಿಯ ಹಿಡಿತದಿಂದ ಪಾರಾಗುವುದು. "ಅಹಂಕಾರವೆಂಬ ಅಗಲ ಹಿಡಿದು ಮಾಡುವ ಭಕ್ತಿ ತನ್ನನ್ನೆ ಇರಿಯುವುದು" ಎನ್ನುತ್ತಾನೆ ಅಲ್ಲಮ. ಅಹಂಕಾರ ಮನವನಿಂಬುಗೊಂಡಲ್ಲಿ ದೇವರು ದೂರ ಸರಿಯುವನು. ಅಹಂಕಾರರಹಿತ ಭಕ್ತನಲ್ಲಿ ಸನ್ನಿಹಿತನಾಗಿರುವನು. ಶಿವನಿಗೆ ಪ್ರಿಯವಾದುದು ನಿರಹಂಕಾರ. ನಾನು ನೀಡಿದೆ, ನಾನು ಮಾಡಿದೆನೆಂಬ ಅಹಂಕಾರವಿರಬಾರದು. 'ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು' ಎನ್ನುವ ಅಹಂಭಾವ ಹೋಗಿ ನಿನಗೆ ನಿನ್ನವನಾಗಿ ನಾ ಬಡಿಸುವೆನು. ಕೊಡಲಿಕ್ಕೆ ನನ್ನದೆಂಬುದೇನೂ ಇಲ್ಲ. ನಿನ್ನ ಸೊಮ್ಮು ನೀ ಸಲ್ಲಿಸಿಕೋ ಸ್ವಾಮಿ, ನೀವು ಹೇಳುವ ಹಾಗೆ ನಡೆಯುವ ಸೇವಕ, ತೊತ್ತು' ಎನ್ನುವ ಭಾವನೆ ಬೆಳೆದು, ಬಲಿತು ಬರಬೇಕೆಂದಿದ್ದಾರೆ.

ಭಕ್ತನಿಗೆ ಭಗವಂತನಲ್ಲಿ ನಂಬಿಕೆ ಇರಬೇಕು. ಭಗವಂತನಿಗೆ ಆತ್ಮಾರ್ಪಣ ಪೂರ್ವಕವಾಗಿ ಶರಣಾಗಿ ಅವನೇ ಜೀವಿತ ಸರ್ವಸ್ವ ಎಂದು ನಿಚ್ಚಟವಾಗಿ ಹಾಲಲದ್ದು – ನೀರಲದ್ದು ಎಂದು ನಂಬುವ ನಿಷ್ಠೆ, ಶ್ರದ್ಧೆ ಅಗತ್ಯ. ಅದು ಇಲ್ಲದಿದ್ದರೆ ಬರಿಯ ಮಾತಿನ ಮಾಲೆಯಲ್ಲೇನೂ ಪ್ರಯೋಜನವಿಲ್ಲ. ಸಂಕಟ ಬಂದಾಗ ಮಾತ್ರ ವೆಂಕಟರಮಣ ಎನ್ನಬಾರದು. ಸಂಸಾರ ಸಾಗರದಲ್ಲಿ ನುಗ್ಗುನುಸಿಯಾಗುವಾಗಲೂ ಭಕ್ತಿಪಥದಲ್ಲಿ ದೃಢಮನಸ್ಸಿನಿಂದ ಸಾಗಬೇಕು. ಆಗ ಮಾತ್ರ ಸಂಗಮನು ಮನುಷ್ಯನನ್ನು ಕಡೆಗೆ ತನ್ನಂತೆ ಮಾಡಿಕೊಳ್ಳುವನೆಂದು ಅಣ್ಣನವರು "ಭಕ್ತನಾಗಿ ತನ್ನ ಹಿಡಿಯುತ್ತೇನೆಂದು ಹೋದರೆ ನುಗ್ಗುಮಾಡುತ್ತಾನೆ, ನುಸಿಯಮಾಡುತ್ತಾನೆ, ಮಣ್ಣುಮಾಡುತ್ತಾನೆ, ಮಸಿಯಮಾಡುತ್ತಾನೆ. ಕೂಡಲಸಂಗಮದೇವರನ್ನು ನೆರೆನಂಬಿದರೆ ಕಡೆಗೆ ತನ್ನಂತೆ ಮಾಡಿಕೊಳ್ಳುತ್ತಾನೆ" ಆಶ್ವಾಸನೆ ನೀಡಿರುವರು.

ಶಿವನ ಅನುಗ್ರಹಕ್ಕೆ ನಿರ್ಮಲವಾದ ಭಕ್ತಿ ಅಗತ್ಯ. ಮುಕ್ತಿಗೆ ಭಕ್ತಿಯೇ ಮೂಲ. ಮನಸ್ಸು ಶುದ್ಧವಾಗದ ಹೊರತು ಶಿವಭಕ್ತಿ ಸ್ಥಿರವಾಗುವುದಿಲ್ಲ. ಅಣ್ಣನವರು ಅಂತಹ ಮನಶ್ಶುದ್ಧಿಗಾಗಿ ಸಾಧನೆ ಮಾಡುತ್ತಿದ್ದರು. ಇದನ್ನು ಅಕ್ಕಪಕ್ಕದ ಜನರು ನೋಡಿ "ಅಣ್ಣನು ಎಂತಹ ಭಕ್ತನಯ್ಯ" "ಎಂತಹ ಉದಾರಿ" ಎಂದು ಸ್ತೋತ್ರ ಮಾಡತೊಡಗಿದರು. ಇನ್ನು ಕೆಲವರು ಅವರನ್ನು 'ಭಕ್ತಶಿರೋಮಣಿ','ಭಕ್ತಿ ಭಂಡಾರಿ' ಎಂದೆಲ್ಲ ಹೊಗಳತೊಡಗಿದರು. ಆದರೆ ಅವರು "ಅನುಭಕ್ತನೆಂಬ ನುಡಿ ಸುಡದೆ"? "ನಮ್ಮ ಕೂಡಲಸಂಗನ ಶರಣರ ಮುಂದೆ ಅನು ಭಕ್ತನೆಂಬ ನಾಚಿಕೆ ಸಾಲದೆ ?" "ಎನ್ನಲ್ಲಿ ಭಕ್ತಿಯ ಸಾಸಿವೆಯ ಷಡ್ಭಾಗದಿನಿತಿಲ್ಲ" ಎನ್ನುವ ನಿಲುವನ್ನು ಹೊಂದಿ ಹೇಳುತ್ತಿದ್ದರು. ಭಕ್ತಿ ಇಲ್ಲದ ಬಡವ ನಾನು ಎನ್ನುವ ಅಣ್ಣನವರು, ಎಂದಾದರೂ ತಾನು ಭಕ್ತನೆಂದು, ತಾನು ಮಾಡುತ್ತಿರುವನೆಂದು ಕೊಚ್ಚಿಕೊಳ್ಳುವರೆ? ಎಂದೇ "ಎಳ್ಳು ಇಲ್ಲದ ಗಾಣವನಾಡಿದ ಎತ್ತಿನಂತೆ ಆಯಿತು ಎನ್ನ ಭಕ್ತಿ. ನನ್ನ ಭಕ್ತಿ ಉಪ್ಪನ್ನು ನೀರಿನಲ್ಲಿ ಅದ್ದಿ ಮೆಲಿದಂತಾಯಿತು. ಕೂಡಲಸಂಗಮದೇವ ನಾನು ಮಾಡಿದೆನೆಂಬ ಕಿಚ್ಚು ಸಾಲದೆ" ಎಂದು ನೊಂದುನುಡಿದಿದ್ದಾರೆ. ಎಳ್ಳು ಹಾಕದೆ ಗಾಣ ತಿರಿವಿದರೆ ಅದರಲ್ಲಿ ಎಣ್ಣೆ ಹೊರಬರುವುದಿಲ್ಲ. (ಎತ್ತಿಗೆ ವೃಥಾ ಕಷ್ಟನಷ್ಟ ?). ಜೊಳ್ಳು ತೂರಿದರೆ ಅದರೊಳಗಿಂದ ಅಕ್ಕಿ ಹೇಗೆ ಹೊರಡುವುದಿಲ್ಲವೋ ಹಾಗೆ ನಾನು ಮಾಡುತ್ತಿದ್ದೇನೆ ಎನ್ನುವುದು ವ್ಯರ್ಥ ಎಂದು ವ್ಯಥೆಪಟ್ಟಿದ್ದಾರೆ.

ಲೋಕದಲ್ಲಿ ಬದುಕುತ್ತಿರುವ ಪ್ರಾಣಿಗಳಿಗೆಲ್ಲ ಮಾನವಪ್ರಾಣಿ ಶ್ರೇಷ್ಠನು. ಪ್ರಾಣಿ ಸಾಮಾನ್ಯವೆಲ್ಲವೂ ಕೇವಲ ಆಹಾರ ವಿಹಾರಗಳಲ್ಲಿಯೇ ರಮಿಸುತ್ತಿದ್ದರೆ, ಮಾನವನು ಮಾತ್ರ ತನ್ನ ಜನ್ಮ ಸಾರ್ಥಕತೆಗೆ ಅವಕಾಶ ಹೊಂದಿದ್ದು ಹೋರಾಟ ನಡೆಸುತ್ತಿರುವನು. ಅಶನ ವಸತಿಗಳಿಗಾಗಿ ಹೋರಾಡುವ ಪ್ರಾಣಿ, ಅಷ್ಟರಿಂದಲೇ ತೃಪ್ತಿಹೊಂದಿ ಚೇತನ ವಿಕಾಸದ ಕಡೆಗೆ ಗಮನ ಕೊಡುತ್ತಿಲ್ಲ. ಹಾಗೆ ಕೆಲವರು ಮನುಷ್ಯರಲ್ಲೂ ಇದ್ದಾರೆ. ಒಮ್ಮೊಮ್ಮೆ ಸಾಮಾನ್ಯರಂತೆ ದೇಹರಕ್ಷಣೆಯಷ್ಟರಲ್ಲಿಯೇ ತೃಪ್ತನಾಗುತ್ತಿದ್ದೇನೆ, ನನ್ನ ಭಕ್ತಿಯು ಉದರ ಪೋಷಣೆಗಾಗಿ ಕೈಗೊಂಡಿರುವ ನಟನೆಯ ವೃತ್ತಿ ಎಂದು ಅನಿಸಿರಬೇಕು. ಆ ಸಮಯದಲ್ಲಿ "ಬಸುರ ಬಾಳುವೆಗೆ ನಿಮಲ್ಲಿ ಮಸಿಯನ್ನು ಹೂಸಿ, ನೇರಿಲ ಹಣ್ಣನ್ನು ಮಾರುವನಂತೆ, ಕಾಲಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮರೆ ಹೊಕ್ಕಿರುವೆನು. ಆವುದು ಹುಸಿಯೆಂಬೆ, ಆವುದು ಕಿರಿದೆಂಬೆ, ಇದನ್ನು ನೀನು ಬಲ್ಲೆ. ನಾನು ಉದರ ಪೋಷಕನಯ್ಯ" ಎಂದು ಕೂಡಲ ಸಂಗಮನಲ್ಲಿ ನಿವೇದಿಸಿಕೊಂಡರು. ಹೀಗೆಯೇ ಇನ್ನೊಂದೆಡೆ "ಇಂದಿಗೆಂತು, ನಾಳಿಂಗೆಂತು ಎಂದು ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ" ಎನ್ನುವ



ಚಿಂತೆಯನ್ನು ತೋಡಿಕೊಂಡಿದ್ದಾರೆ. ಭಾವಶುದ್ಧಿಯಿಲ್ಲದೆ ಹೊರಗೆ ವೇಷಭೂಷಾದಿಗಳಿಂದ ಭಕ್ತರಾಗಿದ್ದಾರೆ. ಅದು ಉದರಪೋಷಣೆಗೆ ಎನ್ನುವ ಅಭಿಪ್ರಾಯ ಇಲ್ಲಿದೆ.

ಸ್ಥಾವರಲಿಂಗದ ಪೂಜೆಯೂ, ವಿಗ್ರಹಾರಾಧನೆ, ದೇವಸ್ಥಾನಗಳ ನಿರ್ಮಾಣವನ್ನು ಅಲ್ಲಮ ಒಪ್ಪುವುದಿಲ್ಲ. ಅವನು ಕಂಡ ದೇವನಾದರೋ ನಿರಾಕಾರನೇ ಹೊರತು ಸಾಕಾರನಲ್ಲ. ದೇವರು (ಇಲ್ಲಿ ಶಿವನು) ವಿಶ್ವವ್ಯಾಪಿ, ವಿಶ್ವತೋ ಬಾಹು, ವಿಶ್ವತಶ್ಚಕ್ಷುಃ ಜಗದಗಲ ಮುಗಿಲಗಲವಾಗಿದ್ದಾನೆ. ಇಂತಹವನಿಗೆ ನಾವು ಗುಡಿಕಟ್ಟಬಲ್ಲವೆ? ಕಲ್ಪನೆಯ ದೇವರು ಕಲ್ಪನೆಯ ಭಕ್ತಿಗೆ ಸ್ಥಾನವಿಲ್ಲ. ತಾವೇ ಲಿಂಗವಾಗಲರಿಯದೆ ಲಿಂಗವನ್ನು ಇದಿರಿಟ್ಟುಕೊಂಡು ಪೂಜಿಸುವುದನ್ನು ಅಲ್ಲಮ ಖಂಡಿಸುತ್ತಾನೆ. ಅವನ ಅಭಿಪ್ರಾಯವೇನೆಂದರೆ "ದೇಹೋ ದೇವಾಲಯಃ ಪ್ರೋಕ್ತಃ ಜೀವೋ ದೇವಸ್ಸ ನಾತನಃ"ಎನ್ನುವುದೇ ಆಗಿದೆ. "ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ। ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ" ಎನ್ನುವ ಮಾತೂ ಇದನ್ನೇ ಸ್ಪಷ್ಟಪಡಿಸುತ್ತಿದೆ. ಅಂದರೆ ಸದ್ಭಕ್ತರ ನಿರ್ಮಲ ಮನಸ್ಸಿನಲ್ಲಿ ಶಿವನಿರುವನು. ದೇಹದೊಳಗೆ ಇಂತಹ ದೇವಾಲಯವೊಂದಿದ್ದು ಮತ್ತೆ ಬೇರೆ ದೇವಾಲಯ ಬೇಕಾಗಿಲ್ಲ. ಆದ್ದರಿಂದ ಈ ನಶ್ವರವಾದ ದೇಹ ಈಶ್ವರ ಸೇವೆಗೆ ಸಂದು ಸಾರ್ಥಕವಾಗಬೇಕೆಂದು "ನನ್ನ ಕಾಯವೇ ಕೈಲಾಸವಾಯಿತು ಮನಸ್ಸು ಲಿಂಗವಾಯಿತು; ತನುವೇ ಸಜ್ಜೆಯಾಗಿದೆ ನೆನೆವಡೆ ದೇವನಿರುವನೆ ? ನೋಡುವರೆ ಭಕ್ತನಿರುವನೆ? ಗುಹೇಶ್ವರ ಲಿಂಗ ಲೀಯವಾಯಿತು" ಎನ್ನುತ್ತಾನೆ ಅಲ್ಲಮ. ಜೀವನು ಏರಬಹುದಾದ ಅಂತಿಮ ನಿಲುವನ್ನು ಇಲ್ಲಿ ಕಾಣಬಹುದಾಗಿದೆ.

ಇಲ್ಲಿ ಅದ್ವೈತ ಭಾವವೂ ಇದೆ. "ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು" ಎಂದು ನಿರ್ಭೀತಿಯಿಂದ ನುಡಿದಿರುವವನು, ಅಲ್ಲಮ.

ಆತ್ಮನಃ ಆಕಾಶಸ್ಸಂಭೂತಃ। ಆಕಾಶಾ
ದ್ವಾಯುಃ। ವಾಯೋರಗ್ನಿಃ
ಅಗ್ನೇರಾಪಃ ಅದ್ಭ್ಯಃ ಪೃಥಿವೀ ॥
(ತೈತ್ತಿರೀಯಾರಣ್ಯಕ)

ಪರಮಾತ್ಮನಿಂದಲೇ ಪೃಥ್ವಿ, ಅಪ್, ತೇಜ, ವಾಯು ಆಕಾಶ ಈ ಪಂಚಭೂತಗಳು ಹೊರಟಿದ್ದು, ಅವುಗಳ ಸಂಯೋಗದಿಂದಾದ ಈ ಮೃಣ್ಮಯ ಶರೀರದಿಂದಲೇ ವ್ಯವಹರಿಸಬೇಕಾಗಿದೆ. ಅದರಿಂದ ಬಂದ ಮನುಷ್ಯ, ಅದರಲ್ಲಿಯೇ ಲಯವಾಗುತ್ತಾನೆ. 'ನಾನು ಒಬ್ಬನು ಸುಡುವರೈವರು ಮೇಲು ಕಿಚ್ಚು ಘನ ನಿಲ್ಲಲು ಬಾರದು!'ಎಂದಿಲ್ಲವೆ ಅಣ್ಣನವರು. ಈ ಸ್ಥಿತಿಯಿಂದ ಬಿಡುಗಡೆ ಹೊಂದಿದರೆ ನಿಸ್ಸಂಗವಾಗಿ ಪರಮಾತ್ಮನು ಅನುಭವಕ್ಕೆ ಬರುತ್ತಾನೆ. ಇದನ್ನೇ ಅಲ್ಲಮ "ಐವರ ಸಂಗದಿಂದ ಬಂದೆ ನೋಡಯ್ಯ. ಐವರ ಸಂಗದಿಂದ ನಿಂದೆ ನೋಡಯ್ಯ, ಐವರೂ ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು. ನಾನೊಬ್ಬನೆ ನಿಸ್ಸಂಗಿಯಾಗಿ ಉಳಿದೆನು. ಗುಹೇಶ್ವರನೆಂಬ ನಿತ್ಯ ನಿರಂಜನನ ರೂಪಿಲ್ಲದ ಘನವ ಕಂಡೆನು" ಎಂದಿದ್ದಾನೆ. ಡಾ॥ ಎಲ್. ಬಸವರಾಜು ಅವರು ಈ ವಚನದ ಅರ್ಥವನ್ನು ಹೀಗೆ ವಿವರಿಸಿದ್ದಾರೆ: "ಪಂಚಭೂತಗಳ ಸಂಗದಲ್ಲಿ ಉದಯಿಸಿದೆ. ಪಂಚೇಂದ್ರಿಯಗಳ ಸಂಗದಲ್ಲಿದ್ದೆ. ಇಂತಹ ಪಿಂಡದಲ್ಲಿದ್ದ ಜೀವನಾದೆನಗೆ ಜ್ಞಾನೋದಯವಾಗಿ ಶಿವಭಾವ ಸಂಪನ್ನನಾಗಲು ಆ ಪಂಚಭೂತಗಳು ತಮ್ಮಲ್ಲಿ ತಾವೇ ನಷ್ಟವನೆಯಿದ್ದವು. ಹೀಗೆ ಪಂಚಭೂತಗಳ ಪಿಂಡವಳಿದು ಸರ್ವಾಂಗ ಲಿಂಗವಾಗಿ, ತಾನಲ್ಲದೆ ಮತ್ತಾರೂ ತನಗಿಲ್ಲದೆ, ನಿಸ್ಸಂಗಿಯಾಗಿರಲು ಮಹಾಘನ ವೇದ್ಯವಾಯಿತು."

ಅಲ್ಲಮನು ತನ್ನದೊಂದು ವಚನದಲ್ಲಿ ಭಕ್ತಿ ಭಾವವನ್ನು ತೋಟ ಬೆಳಸುವ ಕೆಲಸಕ್ಕೆ ಹೋಲಿಸಿದ್ದಾನೆ. ತೋಟಿಗನು ಯಾವಾಗಲೂ ಎಚ್ಚರವಾಗಿದ್ದು ಗಿಡಮರಬಳ್ಳಿಗಳನ್ನು ಪಶುಪಕ್ಷಿಗಳು ನುಗ್ಗಿ ನಾಶಮಾಡದಂತೆ ಸುತ್ತಮುತ್ತಲು ಮುಳ್ಳು ಬೇಲಿಯನ್ನು ಹಾಕಿ ಕಾಪಾಡಬೇಕು. ಹಾಗೆಯೇ ಆಧ್ಯಾತ್ಮಿಕ ಸಸಿಯನ್ನು ತಿನ್ನಲು ಪಂಚೇಂದ್ರಿಯಗಳೆಂಬ ಎತ್ತುಗಳು ಹೊಂಚು ಹಾಕುತ್ತಿರುತ್ತವೆ. ಅವುಗಳನ್ನು ಒಳಗೆ ಬರಲು ಬಿಡಬಾರದು. ಅದಕ್ಕೆ ಅವಕಾಶವಿಲ್ಲದಂತೆ ಸಮತೆ, ಸೈರಣೆ, ಶಾಂತಿ,ಸದಾಚಾರ ಮೊದಲಾದ ಸದ್ಗುಣಗಳ ಬೇಲಿಯನ್ನು ಹಾಕಿ ಗಿಡ (ಮನಸ್ಸನ್ನು) ಸಂರಕ್ಷಣೆಮಾಡಬೇಕು ಎಂದು "ತನುವನ್ನು ತೋಟವಮಾಡಿ, ಮನಸ್ಸನ್ನು ಗುದ್ದಲಿ ಮಾಡಿಕೊಂಡು ಭ್ರಾಂತಿಯ ಬೇರನ್ನು ಅಗೆದು ಕಳೆದು, ಸಂಸಾರದ ಹೆಂಟೆಯ ಬಗಿದು ಬ್ರಹ್ಮ ಬೀಜವನ್ನು ಬಿತ್ತಬೇಕು. ಅಖಂಡಮಂಡಲವೆಂಬ ಭಾವಿ. ಪವನವೇ ರಾಟಾಳ, ಅದರಿಂದ ಸುಷುಮ್ನ ನಾಳದಿಂದ ನೀರನ್ನು ಎತ್ತಬೇಕು. ಬಸವಗಳೈವರು (ಪಂಚೇಂದ್ರಿಯಗಳು) ತೋಟದೆಗೊಳ ನುಗ್ಗಿ ಸಸಿಯನ್ನು ಹಾಳು ಮಾಡದಂತೆ ಸಮತೆ, ಸೈರಣೆಗಳೆಂಬ ಬೇಲಿಯನ್ನು ಹಾಕಬೇಕು. ಅಷ್ಟೇ ಅಲ್ಲ. ಯಾವಾಗಲೂ ಜಾಗರದಿಂದಿದ್ದು ಆ ಸಸಿಯನ್ನು ಬೆಳಸಬೇಕು" ಎಂದಿದ್ದಾನೆ.

ಒಂದೆಡೆ ಸಿದ್ಧರಾಮನು "ಸಾವನ್ನಕ್ಕೂ ಸಾಧನೆ ಮಾಡಿದರೆ ಕಾದುವ ಠಾವಿನ್ನಾವುದು" ಎಂದು ಪ್ರಶ್ನಿಸಿದ್ದಾನೆ. ಸಾಯುವವರೆಗೂ ಸಾಧನೆ ಮಾಡುತ್ತಾ ಇದ್ದರೆ ಯುದ್ಧ ಮಾಡುವುದು ಯಾವಾಗ? ಕೃಷಿಯನ್ನು ಮಾಡಿ ಉಣ್ಣದೆ ಹಸಿವನ್ನು ಬಗೆಹರಿಸಿಕೊಳ್ಳಲು ಸಾಧ್ಯವಿಲ್ಲ. ನಿಜ, ಮಾಡಿ ಉಣ್ಣಬೇಕು. ಆದರೆ ದಿನವೆಲ್ಲವೂ ಕೃಷಿ ಮಾಡುತ್ತಲೇ ಇದ್ದರೆ ಉಣ್ಣುವುದು ಯಾವಾಗ? ಅಂದರೆ ಸಾಧನೆಯಿಲ್ಲದೆ ಸಾಧ್ಯವಿಲ್ಲ. ಸಾಧನೆಯಿಂದ ಸಾಧ್ಯ ಅಂದರೆ ಸಿದ್ಧಿಯನ್ನು ಪಡೆಯಬೇಕಾಗಿರುವುದು. ಸಾಧಕನಿಗೆ ಸಿದ್ಧಿ ಲಭಿಸಲು ಕಾಲಬೇಕು. ಈ ಕಾಲ (ಕಾಯುವ) ಕೆಲಸ ಸಾಯುವತನಕ ಅಲ್ಲವೇ ಅಲ್ಲ. ಸಿದ್ಧಿಯಾದ ಮೇಲೆ ಪೂರ್ಣತ್ವ ಅಮೃತತ್ತ್ವ ಲಭಿಸುವುದು. ಇಂತಹವನಿಗೆ ಇನ್ನು ಈ ಲೋಕದಲ್ಲಿ ಹೊಂದಬೇಕಾದುದು ಏನೂ ಇರುವುದಿಲ್ಲ. ಇನ್ನು ಇದ್ದು ಪಡೆಯ ಬೇಕಾದದ್ದು ಏನೂ ಉಳಿದಿರುವುದಿಲ್ಲ. ಪಡೆಯ ಬೇಕಾದ್ದೆಲ್ಲವನ್ನು ಪಡೆದ ಮೇಲೆ ಇರುವುದರಿಂದಾಗುವ ಪ್ರಯೋಜನವೇನು? ಆದ್ದರಿಂದ ಸಾಧನೆಯಲ್ಲೇ ಸಾಯುವುದು, ಸಿದ್ಧಿಯಾದ ಮೇಲೆ ಈ ಮರ್ತ್ಯ ಲೋಕದಲ್ಲಿರುವುದು ಸರಿಯಲ್ಲ ಎಂದು ಅಲ್ಲಮನು "ಸಾಯುವ ತನಕ ಸಾರವ (ಬಾಣ) ಮಾಡಿದರೆ ಇನ್ನು ಕಾದಾಡುವ ದಿನ ಯಾವುದು? ಬಾಳುವತನಕ ಭಜಿಸುತ್ತಿದ್ದರೆ 'ತಾನಹ' ದಿನ ಯಾವುದು? ಅರ್ಥವುಳ್ಳನ್ನಕ್ಕರ ಅರಿವುತಿದ್ದರೆ ನಿಜವನ್ನೈದುವ ದಿನ ಯಾವುದು? ಕಾರ್ಯಕ್ಕಾಗಿ ಬಂದು ಕಾರ್ಯ ಕೈಸಾರಿದ ಬಳಿಕ ಇನ್ನು ಮರ್ತ್ಯ ಲೋಕದ ಹಂಗೇಕೆ? ತನಿ ರಸತುಂಬಿದ ಅಮೃತ ಫಲ ಒಮ್ಮೆ ತೊಟ್ಟು ಬಿಡುವುದು" ಎಂದು ಹೇಳುತ್ತಾನೆ. 'ಪಕ್ವವಾದ ಹಣ್ಣು ತೊಟ್ಟು ಕಳಚಿ ಬಿದ್ದ ಮೇಲೆ ಮುನ್ನಿನಂತೆ ಹೋಗಿ ತೊಟ್ಟ ಹತ್ತಬಲ್ಲುದೆ? ತನ್ನ ನಿಜವನರಿದ ಮೇಲೆ ಶರಣನು ಮುನ್ನಿನಂತೆ ಲೋಕದವರ ಕೂಡ ಬಾಳಬಲ್ಲನೆ'? ಇದೇ ಸಮಯದಲ್ಲಿ "ಹಣ್ಣಮೆದ್ದ ಬಳಿಕ ಆ ತರುವನಾರು ತರಿದರೇನು? ಹೆಣ್ಣ ಬಿಟ್ಟ ಬಳಿಕ ಆಕೆಯ ನಾರು ಕೂಡಿಕೊಂಡರೇನು? ಮಣ್ಣ ಬಿಟ್ಟ ಬಳಿಕ ಆ ಕೆಯ್ಯನಾರುತ್ತರೇನು? ಚನ್ನಮಲ್ಲಿಕಾರ್ಜುನನರಿದ ಬಳಿಕ ಈ ಕಾಯವ ನಾಯತಿಂದರೇನು ನೀರು ಕುಡಿದರೇನು"? ಎನ್ನುವ ಅಕ್ಕನ ವಾಣಿಯನ್ನು ಆಲಿಸಿ. ಇಲ್ಲಿನ ಬೋಧೆ ಸಾಧಕಂಗೆ ಜ್ಯೋತಿಪಥವನ್ನು ತೋರುತ್ತಿದೆ.

'ತನುವಕೊಟ್ಟು ಗುರುವನ್ನು ಒಲಿಸಬೇಕು. ಮನವಕೊಟ್ಟು ಲಿಂಗವನ್ನು ಒಲಿಸಬೇಕು. ಧನವನ್ನು ಕೊಟ್ಟು ಜಂಗಮನನ್ನು ಒಲಿಸಬೇಕು. ಇದುವೇ ತ್ರಿವಿಧ ದಾಸೋಹ. ಹೊನ್ನು, ಹೆಣ್ಣು, ಮಣ್ಣು ಯಾವುದೂ ಮನಸ್ಸಿನ ವಿಷಯಗಳಲ್ಲ. ಅವೆಲ್ಲವೂ ಜಗಕ್ಕಿಕ್ಕಿದ ವಿಧಿ. ತನ್ನದೆಂಬುದು ಜ್ಞಾನರತ್ನ. ಅದನ್ನು ಮನಸ್ಸು ಅಲಂಕರಿಸಿದರೆ ಅದಕ್ಕಿಂತ ಬೇರೆ ಸಿರಿವಂತರು ಯಾರು ಇಲ್ಲ. ಹೀಗೆ ಮನಸ್ಸು ಮಹದೇವನ ಚಿಂತನೆಯಲ್ಲಿ ತೊಡಗಿದರೆ ನಿರಂಜನ ಮಹಾದೇವನಾಗಿ ಮೆರೆಯುವನೆಂದು "ಭೂಮಿ ನಿನ್ನದಲ್ಲ. ಹೇಮ ನಿನ್ನದಲ್ಲ. ಕಾಮಿನಿ ನಿನ್ನವಳಲ್ಲ. ಅವು ಜಗಕ್ಕಿಕ್ಕಿದ ವಿಧಿ. ನಿನ್ನಒಡವೆ ಎಂಬುದು ಗುರುಲಿಂಗ ಜಂಗಮಕ್ಕೆ ದಾಸೋಹ ಮಾಡುವ ಜ್ಞಾನರತ್ನ. ಅಂತಪ್ಪ ದಿವ್ಯರತ್ನವ ಕೆಡಗುಡದೆ ಆ ರತ್ನವನ್ನು ನೀನಲಂಕರಿಸಿದೆಯಾದರೆ ನಮ್ಮ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತರಾರೂ ಇಲ್ಲ, ಎಲೆಮನವೆ!" ಎಂದು ಮನಸ್ಸಿಗೆ ಬೋಧಿಸಿದ್ದಾರೆ.

ಇಲ್ಲಿನ ಕೆಲವು ವಚನಗಳು ಕಾಯದ ಇತಿಮಿತಿ ಅದರ ಮೂಲಕ ಅರಿಯಬೇಕಾದುದು ಪರವಸ್ತುವನ್ನು ಎಂದಿವೆ. ಅಣ್ಣನವಚನಗಳು ಭಕ್ತನ ಮನಸ್ಸಿನ ಕುರಿತ, ಸ್ವಾತ್ಮ ವಿಮರ್ಶೆ ಮಾಡಿವೆ. ಅಲ್ಲಮನ ವಚನಗಳು ಮರ್ತ್ಯದ ಹಂಗು ತೊರೆದು ಜೀವ ನಿಜವನ್ನು ತಿಳಿದು ತಾನೇ ತಾನಾಗುವ ಸ್ಥಿತಿಯನ್ನು ವರ್ಣಿಸುತ್ತವೆ. ಒಟ್ಟಾರೆ ಇಲ್ಲಿನ ವಚಗಳು ತನ್ನಲ್ಲಿರುವ ದೋಷಗಳನ್ನು ತಿಳಿದು ತಿದ್ದಿಕೊಂಡು ಸಾಧಕನು ತನ್ನ ಗುರಿಯತ್ತ ಸಾಗಲು ಸಹಾಯಕವಾಗಿವೆ. ಅದನ್ನು ಎಲ್ಲರೂ ಪಡೆದು ಪಾರಮಾರ್ಥಿಕ ಲಾಭವನ್ನುಗಳಿಸಲಿ.



 ಗೃಹಲಕ್ಷ್ಮಿ 

# ಶಬರಿ

ಆರ್ಯಾವರ್ತದ ಆದಿಮಹಾಕಾವ್ಯಗಳು ಎರಡು. ಶ್ರೀಮತ್ ರಾಮಾಯಣ ಮತ್ತು ಶ್ರೀಮತ್ ಮಹಾಭಾರತ.

ಪಿತೃವಾಕ್ಯಪರಿಪಾಲನೆ, ಏಕಪತ್ನೀವ್ರತ, ಕಷ್ಟಸಹಿಷ್ಣುತೆ ಮುಂತಾದ ಆದರ್ಶಗಳ ಮೂರ್ತಿರೂಪ ಶ್ರೀರಾಮಚಂದ್ರ. ರಾಮಾಯಣವು ಭಾರತೀಯನ ಉಸಿರು ಮಾತ್ರವಲ್ಲ, ದಾರಿದೀಪ, ಮಾರ್ಗದರ್ಶಿ. ಹಿಂದೂ ಧರ್ಮಕ್ಕೆ ಅಲ್ಲ, ಮುಸ್ಲಿಂಬಾಂಧವರನ್ನೂ ಆಕರ್ಷಿಸಿದ ಆದರ್ಶ ಜೀವನ ಶ್ರೀರಾಮಚಂದ್ರನದು. ಕಬೀರರ ಆರಾಧ್ಯ ದೈವ ರಘುರಾಮ. ಮದ್ರಾಸ್ ಹೈಕೋರ್ಟಿನ ಮುಸ್ಲಿಂ ನ್ಯಾಯಾಧೀಶರೊಬ್ಬರು ರಾಮಾಯಣ ಕಾವ್ಯವನ್ನು ಮೆಚ್ಚಿ ರಾಮಚಂದ್ರನ ಆರಾಧಕರು ತಾವೆಂದು ತಿಳಿಸಿದ್ದಾರೆ.

ಹಿಂದೂ ಧರ್ಮದ ಜೀವಾಳ ತ್ಯಾಗ. ರಾಮಾಯಣದ ಮೂಲಭೂತ ತತ್ವವೂ ತ್ಯಾಗವೇ ಆಗಿದೆ. ರಾಮಾಯಣದ ಕಾವ್ಯದಲ್ಲಿ ಹರ್ಷ; ದುಃಖ, ಪ್ರೇಮ ಮುಂತಾಗಿ ಅನೇಕ ಭಾವನೆಗಳು ವಾಚಕನ ಮನಸ್ಸನ್ನು ಆವರಿಸಿದರೂ ಸಹ ಕೆಲವು ಸನ್ನಿವೇಶಗಳು ಮನ ಮಿಡಿಯುವಂತೆ ಹೃದಯ ಕಟ್ಟಿದಂತಿವೆ. ಅಂತಹ ಸನ್ನಿವೇಶಗಳಲ್ಲಿ; ಶಬರಿಗೆ ರಾಮಚಂದ್ರನು ಅತಿಥಿಯಾಗುವ ಸಂದರ್ಭ ಒಂದು.

ಸೀತಾಪಹರಣದ ನಂತರ ದುಃಖಿತ ರಾಮಚಂದ್ರ ಲಕ್ಷ್ಮಣನೊಂದಿಗೆ ನೈರುತ್ಯಮಾರ್ಗವಾಗಿ ಬರುತ್ತಿರಲು ಕಬಂಧ ರಾಕ್ಷಸನು ರಾಮಚಂದ್ರನನ್ನು ಹಿಡಿದನು. ಅಂತಹ ಸಾವಿರ ಕಬಂಧರನ್ನು ಒಂದೇ ಬಾರಿಗೆ ನಿರ್ನಾಮ ಮಾಡಬಲ್ಲಂತಹ ರಘುರಾಮ ತನ್ನ ಸಹಜ ಶೌರ್ಯವನ್ನೂ ಮರೆತವನಂತೆ ಸಿಕ್ಕಿ ಬೀಳುತ್ತಾನೆ. ಆಗ ಲಕ್ಷ್ಮಣ ಕಬಂಧನನ್ನು ಸಂಹರಿಸಿ ತನ್ನಣ್ಣನನ್ನು ಕರೆದುಕೊಂಡು ಮುನ್ನಡೆಯುತ್ತಾನೆ.

ಇತ್ತ ಮತಂಗ ಮುನಿಗಳ ಶಿಷ್ಯೆಯೂ, ತಪಸ್ವಿನಿಯೂ ಆದ ಶಬರಿ, ಶ್ರೀರಾಮನಿಗಾಗಿ ಕಾಯುತ್ತಿದ್ದಾಳೆ. ರಾಮ ಇಂದು ಬರಬಹುದು, ನಾಳೆ ಬರಬಹುದೆಂದು ಹಗಲಿರುಳೆನ್ನದೆ ಕಾಯುತ್ತಿದ್ದಾಳೆ. ಬರಿಗೈಯ್ಯಲ್ಲಲ್ಲ, ಹತ್ತು ವರ್ಷಗಳಿಂದ ತಾನೇ ಬೆಳೆಸಿದ ಫಲ ಪುಷ್ಪಗಳು ಸಾಲದೆಂದು ಕಾಡೆಲ್ಲ ಅಲೆದು ಒಳ್ಳೊಳ್ಳೆಯ ಮಧುರಫಲಗಳನ್ನು ಆಯ್ದು ತಂದು ಕಾಯುತ್ತಿದ್ದಾಳೆ. ಆಚೆ ಸ್ವಲ್ಪ ಸಪ್ಪಳವಾದರೂ ರಾಮಚಂದ್ರನೇ ಬಂದನೇನೋ ಎಂದು ಎದ್ದು ಬಾಗಿಲಿಗೆ ಬರುತ್ತಾಳೆ. ಸುಡುಬಿಸಿಲು, ಮೊದಲೇ ಮಬ್ಬಾದ ಕಣ್ಣು ರಣಬಿಸಿಲಿನಿಂದಾಗಿ ಬಿಸಿಲಿಗೆ ಕೈ ಅಡ್ಡಹಿಡಿದು ಸಾಧ್ಯವಾದಷ್ಟು



ಶ್ರೀರಾಮಾಯಣದರ್ಶನಂದಿಂದ:
ಶ್ರೀ ಮು. ಕೃಷ್ಣಪ್ಪ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶರ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ದೂರ ದೂರಕ್ಕೆ ನೋಡಲು ಪ್ರಯತ್ನಿಸುತ್ತಾಳೆ. ಇಲ್ಲ ರಾಮ ಬರಲಿಲ್ಲ, ಮತ್ತೆ ಗುಡಿಸಿಲಿನೊಳಹೊಕ್ಕು ತಾನು ರಾಮನಿಗಾಗಿ ಶೇಖರಿಸಿದ್ದ ಹಣ್ಣಿನ ಬುಟ್ಟಿಯ ಮುಂದೆ ಕುಳಿತು ಯೋಚಿಸಲಾರಂಭಿಸುತ್ತಾಳೆ. ರಾಮಚಂದ್ರನನ್ನು ನೋಡದೆಯೇ ಸಾಯಬೇಕೇನೋ, ಹಾಗೇನಾದರೂ ಆದರೆ ಇಷ್ಟುದಿನಗಳ ನಿರೀಕ್ಷೆ ವ್ಯರ್ಥವಲ್ಲವೆ? ಎಂದೆನಿಸುತ್ತದೆ. ಹಿಂದೆಯೇ ಮನಸ್ಸು ನಿರಾಶೆಯನ್ನು ಕೊಡವಿ ಛೆ, ಛೆ, ಹಾಗೆಂದಿಗೂ ಆಗಲಾರದು, ಗುರುವಿನ ಭವಿಷ್ಯವಾಣಿಯಲ್ಲಿ ಅಪನಂಬಿಕೆ ಪಡಬಾರದು. ಮಹಾ ತಪಸ್ವಿಗಳೂ, ತ್ರಿಕಾಲಜ್ಞಾನಿಗಳೂ ಆದ ಮತಂಗ ಮುನಿಗಳ ನುಡಿ ಎಂದಿಗೂ ಹುಸಿಯಾಗಲಾರದೆಂದೆನಿಸುತ್ತದೆ. ಶಬರಿಯ ನೆನಪು ವರ್ಷಗಳಷ್ಟು ಹಿಂದೆ ಸರಿಯುತ್ತದೆ–

ಒಂದು ದಿನ ಗುರು ಶುಶ್ರೂಷೆ ಮಾಡತ್ತಿದ್ದ ಶಬರಿ ಗುರುದೇವನನ್ನು ಕುರಿತು–

"ಗುರುದೇವ ಕಾಯ ಹಣ್ಣಾಯ್ತು. ಜೀವನ ಸಾಕಾಯ್ತು ಮೋಕ್ಷ ಮಾರ್ಗವನ್ನು ಕರುಣಿಸಿ" ಎಂದು ಬೇಡಿದಾಗ

ಮತಂಗ ಮುನಿಗಳು–

"ಶಬರಿ! ಮುಕ್ತಿಯೇ ನಿನ್ನನ್ನರಸಿ ಬರುವಾಗ ನೀನೇಕೆ ಅದನ್ನು ಹುಡುಕುವೆ? ಕಾಯ ಹಣ್ಣಾದರೂ ಕರ್ಮ ಹಣ್ಣಾಗಬೇಕು. ಅದಕ್ಕೆ ಕಾಲವೂ ಕೂಡಿ ಬರಬೇಕು. ಶ್ರೀ ಮ ನ್ನಾ ರಾ ಯ ಣ ಮೂರ್ತಿಯು ಸೂರ್ಯವಂಶದ ದಶರಥಪುತ್ರನಾಗಿ ಜನಿಸಿ, ಧರ್ಮ ಸಂಸ್ಥಾಪನೆಗಾಗಿ, ವನವಾಸ ಮಾಡಬೇಕಾಗಿ ಬಂದು ಬರುತ್ತಾನೆ. ನೀನಿರುವಲ್ಲಿಗೇ ಬರುವ ಆ ಮೋಕ್ಷಮೂರ್ತಿಯನ್ನು ಅದರಿಸಿ ಉಪಚರಿಸು. ತಾನೇ ತಾನಾಗಿ ಮುಕ್ತಿ ದೊರೆಯುತ್ತದೆ." ಎಂದು ಆದೇಶ ನೀಡುತ್ತಾರೆ.

ಅಂದಿನಿಂದ ಇಂದಿನವರೆಗೆ ಆ ಮುಕ್ತಿಪ್ರದಾಯಕನ ಆಗಮನಕ್ಕಾಗಿ ಮೈ, ಮನವೆಲ್ಲ ಕಣ್ಣಾಗಿ ಕಾಯುತ್ತಿದ್ದಾಳೆ. ಎಂದಿನಂತೆ ಅಂದೂ ಒಂದು ನಿರೀಕ್ಷಣಾರಾತ್ರಿ ಕಳೆಯಿತು. ಬೆಳಕು ಹರಿಯಿತು.

ಇಂದೇಕೋ ಶಬರಜ್ಜಿಯ ಮೈಮನವೆಲ್ಲ ಪುಳಕಗೊಂಡಂತಾಗಿ ಪ್ರಫುಲ್ಲವಾಗಿದೆ. ಯಾವುದೋ ದೊಡ್ಡ ಭಾರವನ್ನು ತುಂಬಾಕಾಲದಿಂದ ಹೊತ್ತಿದ್ದು ಕೆಳಗಿಳಿಸಿದಂತಾಗಿದೆ, ಸೂರ್ಯೋದಯಕ್ಕೆ ಮುಂಚೆಯೇ ಗುಡಿಸಲೊಳಹೊರಗೆಲ್ಲ ರಂಗೋಲೆ ಇಟ್ಟು ಎಂದಿನಂತೆ ಫಲಪುಷ್ಪಗಳನ್ನು ಶೇಖರಿಸಿ ತಂದಿಟ್ಟಾಯಿತು. ಇಂದೇ ರಾಮಚಂದ್ರ ಬರುವನೆಂದು ಅಂತರಾತ್ಮ ನುಡಿಯುತ್ತಿದೆ. ಅದಕ್ಕೆ ಕಾರಣ ಅಲ್ಲಿ ಗಿಡ, ಮರ ಬಳ್ಳಿಗಳೆಲ್ಲ ಎಂದಿಗಿಂತ ಹೊಸದಾಗಿ ನಳನಳಿಸುತ್ತ ತಣ್ಣಗೆ ಚಾಮರ ಬೀಸಿದಂತೆ, ಏನೋ ಸಂಭ್ರಮಗೊಂಡಂತೆ ಸಂತೋಷ ಹೆಚ್ಚಾದಾಗ ಮೈ ಕಿರುಗಂಪನಗೊಳ್ಳುವಂತೆ, ಅಲುಗಾಡುತ್ತಿವೆ. ಆಶ್ರಮದ ಹಕ್ಕಿ ಪಕ್ಕಿಗಳೆಲ್ಲ ತಮ್ಮ ಆಹಾರಾನ್ವೇಷಣೆಯನ್ನೂ ಮರೆತು ಇಂಪಾಗಿ ಕೂಹೂ......ಕೂಹೂ ಎಂದು ಹಾಡುತ್ತಿವೆ. ಕೋಗಿಲೆಯಾದರೋ ಇಂಪಾಗಿ ಧ್ವನಿ ಎತ್ತರಿಸಿ ಕೂಗುತ್ತಿದೆ. ನವಿಲುಗಳು ಲಯಬದ್ಧ ನಾಟ್ಯಕ್ಕೆ ಪ್ರಾರಂಭಿಸಿವೆ. ಇದನ್ನೆಲ್ಲ ಮಂಜುಗಣ್ಣ ಮುದುಕಿ ಶಬರಿ ಕಂಡೇ ಇಂದು ನನ್ನ ಜೀವನದ ಪರ್ವವೇ ನಿಜವೆಂದು ಸಂಭ್ರಮದಿಂದ ಮೀಯ್ದು ಶುಚಿಗೊಂಡು ಫಲ ಪುಷ್ಪಗಳೊಂದಿಗೆ ಸಜ್ಜಾಗಿ ಕಾಯುತ್ತಿದ್ದಾಳೆ. ರವಿ ನಡುನೆತ್ತಿಗೆ ಬಂದಾಯ್ತು. ಶಬರಿಯ ಮನ ಕಳವಳಕ್ಕೀಡಾಯ್ತು. ರಾಮಚಂದ್ರ ಇನ್ನೂ ಬರಲಿಲ್ಲವಲ್ಲವೆಂಬ ಆತುರದಿಂದ ಒಳಗು ಹೊರಗು ಓಡಾಟ ಮೊದಲಾಯ್ತು. ಬಿಸಿಲ ಬೇಗೆ ಹೆಚ್ಚಾಗುತ್ತಿದೆ. ಬಾಗಿಲಲ್ಲಿ ನಿಂತು ನಡು ನೇರ ದಪ್ಪಿದುದರಿಂದ ಒಂದು ಕೈಯ್ಯಲ್ಲಿ ಊರುಗೋಲು ಹಿಡಿದು ಮತ್ತೊಂದು ಕೈಯ್ಯನ್ನು ಬಿಸಿಲಿಗೆ ಮರೆ ಮಾಡಿ ಹಣೆಯ ಮೇಲಿಟ್ಟು ನೋಡುತ್ತಿದ್ದಾಳೆ.

ಮುಂದಿನ ರಾಮಾಗಮನ ಸನ್ನಿವೇಶವನ್ನು ರಾಷ್ಟ್ರಕವಿ ಕುವೆಂಪುರವರು ತಮ್ಮ "ರಾಮಾಯಣ ದರ್ಶನಂ" ಕಾವ್ಯದಲ್ಲಿ ಹೃದಯಮಂಗಮವಾಗಿ ಚಿತ್ರಿಸಿದ್ದಾರೆ.

ಅನತಿ ದೂರದಲ್ಲಿ ಯಾರೋ ಇಬ್ಬರು ಬರುತ್ತಿರುವಂತಿದೆ. ಶಬರಿಯ ಮಂಜುಗಣ್ಣಿಗೆ ತುಸುದೂರವೂ, ಅತಿದೂರವೇ. ಬಂದೂ ಬಿಟ್ಟರು ಗುಡಿಸಲ ಬಾಗಿಲಿಗೆ. ಶಬರಿ ನೋಡುತ್ತಾಳೆ, ಆ 'ಜಟಾಜೂಟ ವಲ್ಕಲಧಾರಿ, ದೂಳೀದೂಸರಿತ ಮೈಯ್ಯ ರೂಕ್ಷರೂಪಗಳ.' ನಿರಾಶೆಗೊಳ್ಳುತ್ತಾಳೆ. ತಾನು ಕಾದ ಸುಂದರ ರೂಪಗಳು ಕಾಣದೆ ನಿರಾಶೆಗೊಂಡು ಬಂದವರನ್ನೇ ತದೇಕ ದೃಷ್ಟಿಯಿಂದ ನೋಡುತ್ತಿರಲು

"ದಣಿದು ಬಂದಿಹೆವಜ್ಜಿ;
ಬಿಸಿಲುರಳುತಿದೆ ಗುಡಿಸಲೊಳಗಿನಿತು ತಾವಿತ್ತು
ತಿನಲಿತ್ತು ಕರುಣಿಸೈ ನಿನ್ನ ಪರದೇಶಿ
ಕಂದರಂ, ಚಿರ ಋಣಿಗಳಂ"

ಎಂದ ಲಕ್ಷ್ಮಣನ ನುಡಿಗೆ–ಯಾರೋ ಬೇಡರೆಂದು ಅನುಮಾನಿಸಿದ ಶಬರಿ;

"ಕಾಡಿನ ಬೇಡರಿಗೆಲ್ಲ ಉಪಚರಿಸಲು ನಾನೇನು ಅಡುಗೂಲಜ್ಜಿ ಅಲ್ಲ" ಎಂದರೂ, ಆ ಮಾತೃ ಹೃದಯ "ಬಡವಳು ಇರುವುದನ್ನು ಕೊಡುವೆ ಒಳಗೆ ಬನ್ನಿ" ಎಂದು ಕರೆದಳು. ಒಳಗೆ ಬಂದ ರಾಮಲಕ್ಷ್ಮಣರನ್ನು ಕುರಿತು–

"ನೀವೆತ್ತಣಿಂದವ್ವೈತಂದಿರಯ್?
ನೀವಾರೊ
ಕಂದಿರಿರ? ನನ್ನ ಈ ಕಣ್ ಮಬ್ಬು; ಬಗೆ
ಮಂಜು;
ತಿಳಿಯೆನೇನೊಂದುಮಂ"

–ಎಂದು ಕೇಳುತ್ತಾಳೆ. ಅದಕ್ಕೆ ಊರ್ಮಿಳೇಶನು–

"ಅಜ್ಜಿ ಮನೆ ಮಠಬಿಟ್ಟು ನಾಡ ಬಿಟ್ಟು ಕಾಡಿಗೆ ಬಂದವರು ಎಲ್ಲಿಂದ ಬಂದರೇನು–ಸ್ನಾನಮಾಡಲು ಹತ್ತಿರದಲ್ಲಾವುದಾದರೂ ಕೊಳವಿದೆಯೇ?" ಬೇಡರಿಗೇಕೆ ಸ್ನಾನವೆಂದು ಅಚ್ಚರಿಗೊಂಡ ಶಬರಿ–

"ಆ ನೇರಿಳೆಮರದಡಿಯಲ್ಲಿ ಬಂದು ಕೊಳವಿದೆ. ನಿಮ್ಮಂತೆ ಮನೆ ಮಠ ಬಿಟ್ಟು ತೊಳಲುತ್ತಿದ್ದಾರೆ ಈ ನಾಡಿನಲ್ಲೂ ಎಷ್ಟೋ ಜನ? ಎಂತಹ ಕೇಡುಗಾಲ ಬಂತಪ್ಪ; ಒಬ್ಬನ ಹೆಂಡತಿಯನ್ನು ಮತ್ತೊಬ್ಬನು ಅಪಹರಿಸುತ್ತಾನೆ" ಎಂದು ತನ್ನಲ್ಲೋ ಹೇಳಿಕೊಂಡಂತೆ ಮಾತಾಡುತ್ತಾಳೆ. ಬೆಚ್ಚಿ ಬಿದ್ದ ರಾಮಚಂದ್ರ;

"ಯಾರ ಸತಿಯನ್ನು ಯಾರು ಅಪಹರಿಸಿದರಜ್ಜಿ" ಎಂದು ಕೇಳಿದ. ಯಾವುದೋ ಪರಧ್ಯಾನದಲ್ಲಿದ್ದ ಶಬರಿ ಮತ್ತೆ ಎಚ್ಚರಗೊಂಡು.

"ಹೋಗು ಮಗು, ಮಿಂದು ಬನ್ನಿ, ಉಂಡ ಮೇಲೆ ಹೇಳುವೆ, ಆ ಹೊಲಸು ಕಥೆಯ" ಎಂದು ಹೇಳಿ ಸ್ನಾನಕ್ಕೆ ಕಳುಹಿಸತ್ತಾಳೆ.

ಸ್ನಾನಕ್ಕೆ ಹೋದ ರಾಮಲಕ್ಷ್ಮಣರ ಬಿಲ್ಲು ಬಾಣ, ನಾರುಡೆಗಳನ್ನು ಮುಟ್ಟಿ ನೋಡಿ ಬೆಚ್ಚಿ ತಾನು ಕಾಯುತ್ತಿರುವ ಶ್ರೀರಾಮನಿವನೇ ಇರಬಹುದೇ? ಎಂದು ಮತ್ತೆ–ಛಿ ಈ ಕಿರಾತರೂಕ್ಷರೂಪ ನನ್ನರಾಮನದಲ್ಲ ಎಂದು ತನ್ನನ್ನು ತಾನೇ ಸಂತೈಸಿಕೊಳ್ಳುತ್ತಾಳೆ.

ಅಷ್ಟರಲ್ಲಿ ಮಿಂದು ಬಂದ ರಾಮ ಲಕ್ಷ್ಮಣರನ್ನು ಕಂಡ ಶಬರಿ ಮತ್ತೊ ಅಚ್ಚರಿಗೊಂಡಳು ಕೊಳೆಬಿಟ್ಟು ಬಂಗಾರದಂತಿರುವ ತೇಜಸ್ಸನ್ನು ಕಂಡು ನುಡಿಯಲ್ಲಿ ನಯ, ನಡೆಯಲ್ಲಿ ಗಾಂಭೀರ್ಯ ಈ ಸಂಸ್ಕಾರ ಬೇಡರಿಗೆಲ್ಲಿ ಬರಬೇಕು? ಸೀತೆ ಇಲ್ಲದಿರುವುದರಿಂದ ಇವರಾರೋ ಬೇರೆ ದೊರೆ ಮಕ್ಕಳಿರ ಬೇಕೆಂದೆಣಿಸಿ, ಎಳೆ ಬಾಳೆಯೆಲೆಯಲ್ಲಿ ಶ್ರೀರಾಮಚಂದ್ರನಿಗಾಗಿ ಶೇಖರಿಸಿಟ್ಟಿದ್ದ ಹಣ್ಣು ಹಂಪಲು, ಗೆಡ್ಡೆ ಗೆಣಸು, ಜೇನ್ತುಪ್ಪಗಳನ್ನು ಬಡಿಸಿ–

"ಆರ ಸಂಪದ ಮಾಡ್ಗೋ? ಮಕ್ಕಳಿರಾ ಬಂದ ತಿಥಿಗಳಾರಾದರೇನು? ನೀವಾದರೂ ಉಂಡು ತೃಪ್ತಿ ಪಡಿ"

ಆರ ಸಂಪದ ಮಾರ್ಗ ಹೇಳಜ್ಜಿ? ನಾಮುಣ್ಣುತ್ತಿರುವ ಈ ಊಟ ಯಾರಿಗೆ ಮೀಸಲಾಗಿತ್ತು. ನಿನ್ನ ರಿಕೆಯ ಅತಿಥಿ ಪುಣ್ಯವಂತನೇ ಆಗಿರಬೇಕು."

"ದಶರಥಕುಮಾರನ್ – ಲಕ್ಷ್ಮಣಾಗ್ರಜನ್,
ನೆಲವೆಣ್ಮಗಳಿಗಿನಿಯನಯ್''–ರಾಮ ಲಕ್ಷ್ಮಣರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

ರಾಮ ಲಕ್ಷ್ಮಣ ಸೀತೆಯರಿಗಾಗಿ ಹತ್ತು ವರ್ಷಗಳಿಂದ ಇದೇ ರೀತಿಯ ಊಟವನ್ನು ಸಿದ್ಧಪಡಿಸಿಕೊಂಡು ಕಾಯುತ್ತಿದ್ದೇನೆ ಗುರುವಿನಾಜ್ಞೆಯಂತೆ" ಎಂದು ಶಬರಿ ತನ್ನ ಗುರುಗಳ ಭವಿಷ್ಯವಾಣಿಯನ್ನು ವಿವರಿಸಿ–

"ಮಕ್ಕಳಿರಾ ನೀವಾರೋ ಉತ್ತರದ ಕಡೆಯುವರಂತಿದ್ದೀರಿ. ನಿಮಗೇನಾದರೂ ಗೊತ್ತೇ ರಾಮನೆಲ್ಲಿರುವ, ಎಂದು ಬರುವನೆಂದು. ಸಾಯುವ ಮುನ್ನ ಒಮ್ಮೆ ಆ ಶಾಂತಿನಿಧಿಯನ್ನು ಕಂಡು ಪ್ರಶಾಂತವಾಗಿ ಕಣ್ಮುಚ್ಚಬೇಕೆಂಬ ನನ್ನಾಸೆ ನೆರವೇರುವುದೇ" ಎಂದು ಗದ್ಗದಿಸಿದ ಶಬರಿಯನ್ನು ಕರಿತು ರಾಮಚಂದ್ರ–

"ಮನೆ ಬಿಟ್ಟು ಕಾಡಾಡಿಯಾಗಿ ಶಾಂತಿ ಇಲ್ಲದೆ ತೊಳಲುತ್ತಿರುವವನನ್ನು ಶಾಂತಿನಿಧಿ ಎನ್ನುವೆಯಲ್ಲ. ಸಾಮಾನ್ಯನನ್ನು ದೇವಮಾನ್ಯನೆನ್ನುವೆ ನಿನ್ನ ಊಹೆ ತಪ್ಪಜ್ಜಿ''

"ಬಿಡು ಬಿಡು ನಿನಗೆ ಗೊತ್ತಿಲ್ಲನಾತ''

"ನನಗೆ ಗೊತ್ತಿಲ್ಲವೆ? ನನ್ನನ್ನು ನಾನೇ
ಅರಿಯನೆ"?

ಶಬರಿ ಬೆರಗುಗೊಂಡು ರಾಮನನ್ನೇ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ರಾಮಚಂದ್ರ ತಲೆ ತಗ್ಗಿಸಿ ಉಣತೊಡಗಿದ.

ಉಂಡು ದಣಿವಾರಿಸಿಕೊಳ್ಳಲು ಮಲಗಿದರು.

"ಬಿಳಿಮೆಯ್ಯನೆಳ್ಚತ್ತು ಹೊರಗೆ ಹೋಗಿರೆ, ನೀಲಿ
ಮೆಯ್ಯವಂ ಕನವರಿಸಿದನ್
ಸೀತೆ, ಬಾ ಇಲ್ಲಿ; ಬಾ ಪ್ರಿಯಜನಕಜಾತೆ''

ಬೇಲದ ಹಣ್ಣಿನ ಪಾನಕ ತಯಾರಿಸುತ್ತಿದ್ದ ಶಬರಿ ಮಾತುಗಳನ್ನು ಕೇಳಿ ಓಡಿಬಂದಳು. ಮಂಚದ ಹತ್ತಿರ ನಿಂತು ನೋಡತೊಡಗಿದಳು,ತನ್ನ ಕಲ್ಪನಾ ರಾಮರೂಪವನ್ನು. ಕನಸಿನಲ್ಲೇ ಮುಗುಳ್ನಗುತ್ತಿರುವ ರಾಮನನ್ನು ಗುರುತಿಸಿ ಹರ್ಷಗೊಂಡು ಪುಳಕಿತಳಾದಳು– ಆದರೇನು ಒಂದೇ ಕ್ಷಣದಲ್ಲಿ ಆ ಶಾಂತಿ ನಿಧಿಯ ಸೌಮ್ಯಮುಖ ಸಂಕೋಚಿಸಿತು. ಶಬರಿ ಬೆಚ್ಚಿ ಬೀಳುವಂತೆ ಕನಸಿನಲ್ಲೇ ಅರ್ಭಟಿಸತೊಡಗಿದನು.

"ನಿಲ್ ನಿಲ್ ರಾಕ್ಷಸಾಧಮ ನಿಲ್, ಪೇಳೆಲ್ಲಿ
ಗುಯ್ದಪಯ್ ನನ್ನ ಸೀತೆಯನೆಲವೋ ನೀಚ"
—ಎಂದು ಬದ್ಧಭ್ರುಕುಟಿಯಾಗಿ ದುಃಸ್ವಪ್ನವನ್ನು ಸೀಳಿ ನಿದ್ದೆಯನೊದ್ದು ಕುಳಿತೆದ್ದನಬ್ಬರಿಸಿ, ಗಾಬರಿಗೊಂಡು ಎದುರಿಗೆ ನಿಂತಿರುವ ಶಬರಿಜ್ಜಿಯನ್ನು ಕಂಡು ನಾಚಿ ತಲೆತಗ್ಗಿಸಿ

"ಕ್ಷಮಿಸಜ್ಜಿ ಕಂಡ ಕಸನನ್ನು ನಿಜವೆಂದು
ಭ್ರಮಿಸಿ ಅಬ್ಬರಿಸಿದೆ ನಿನ್ನ ಭಯಪಡಿಸಿದೆ.''

ಶಬರಿ ಬಿಗಿ ದಪ್ಪಿದಳು ರಾಮಚಂದ್ರನನ್ನು
"ದಮ್ಮಯ್ಯ,
ಸಾಕಿನ್ನು ಮರೆಮಾಡಬೇಡಯ್ಯ, ಓ ನನ್ನ
ಕಂದಯ್ಯ
ರಾಮಚಂದ್ರಯ್ಯ, ಏನಾಯ್ತಯ್ಯ ನನ್ನ
ಮಗಳಿಗೆ''?

ಹೇಳು ಸೀತೆ ಎಲ್ಲಿ? ಏನಾದರೂ ಕೇಡಾಯಿತೆ? ನಾನಾಗಲೇ ನಿನ್ನ ತೆರೆದ ಚೀಲವನ್ನು ನೋಡಿದಾಗ ಸೀರೆಪೊಂದಿತ್ತು. ಆದರೂ ಗುರುತಿಸದಾದೆ.ತಾಯಿ ಅಪ್ಪುಗೆಯ ಸವಿಯುಣ್ಣುತ್ತಿರುವ ಕಂದನಂತೆ ರಾಮಚಂದ್ರ–

"ಆ ನಿರ್ಭಾಗ್ಯ ರಾಮ ನಾನೇ ಅಜ್ಜಿ, ಸೀತೆಯನ್ನು ರಾಕ್ಷಸನು ಎತ್ತಿಕೊಂಡು ಹೋಗಿದ್ದಾನೆ. ಆಕೆಯನ್ನು ಹುಡುಕುತ್ತ ಲಕ್ಷ್ಮಣನೊಂದಿಗೆ ಅಲೆಯುತ್ತಿದ್ದೇನೆ'' ಎಂದು ಶಬರಿಯ ಮಮತೆಯ ತೋಳತೆಕ್ಕೆಯಲ್ಲಿ ಬಿಕ್ಕಿ ಬಿಕ್ಕಿ ಅತ್ತನು ರಾಮಚಂದ್ರ.

"ತಾಯ್ಮಡಿಲೊಳಾರಾದೊಡೇಂ ತಾಂ ಬರಿ
ಶಿಶುಗಳಲ್ತೆ!"

ಶೋಕಭಾರವನ್ನು ತಾಳಲಾರದ ತಾಟಕಿರಿಪು ಶಬರಿಯ ಶುಶ್ರೂಷೆಯಲ್ಲಿ ಅರೆಪ್ರಜ್ಞಾವಸ್ಥೆಯಲ್ಲಿ ಮಲಗಿದನು.

ನೊಂದ ಮನಸುಗಳಿಗೆ ಪ್ರೇಮದಿಂದ ಮಾಡುವ ಉಪಚಾರ ಸಂಜೀವಿನಿಯಾಗಬಲ್ಲುದು.

ಎಡೆ ಬಿಡದೆ, ಹಗಲಿರುಳೆನ್ನದೆ ರಾಮನ ಹತ್ತಿರವೇ ಕಳಿತು ಶುಶ್ರೂಷೆ ಮಾಡುತ್ತ ವನವಾಸದಲ್ಲಿ ಪಟ್ಟ ಬವಣೆಗಳ ಕಥೆಯನ್ನೆಲ್ಲ ಕೇಳುತ್ತಾಳೆ. ಮೈದಡವಿ ಸಂತೈಸುತ್ತಾಳೆ. ಧೈರ್ಯ ಹೇಳುತ್ತಾಳೆ. ಏನಾದರೇನು ರಾಮಚಂದ್ರನ ವಿಚಿತ್ರರುಜೆ ದಿನೇ ದಿನೇ ಉಲ್ಬಣಿಸತೊಡಗಿತು. ರಾಹುಗ್ರಸ್ತರವಿಯಂತಾಗತೊಡಗಿತು ರಾಮಚಂದ್ರನ ಮುಖ.

ಒಂದು ಕಾರಿರುಳ ರಾತ್ರಿಯಲ್ಲಿ ಸನಿಯದಲ್ಲೆ ಹರಿಯುತ್ತಿದ್ದ ಹೊಳೆಯುದಡದಲ್ಲಿ ಲಕ್ಷ್ಮಣನೊಬ್ಬನೇ ಕುಳಿತು ದಿಕ್ಕು ತೋಚದೆ ಶೋಕಭಾರದಿಂದ ಕುಗ್ಗಿ ಸಪ್ತರ್ಷಿ ಮಂಡಲವನ್ನೆ ನೋಡುತ್ತ ಕುಳಿತಿರಲು, ಹಿಂದುಗಡೆ ಯಾರೋ ಹೆಗಲ ಮೇಲೆ ಕೈ ಇಟ್ಟಂತಾಗಿ ನೋಡದೆಯೇ ಶಬರಜ್ಜಿಯ ಕೈ ಎಂದು ಗುರುತಿಸಿದ.

"ಇದೇನು ತಂದೆ ಲಕ್ಷ್ಮಣಾ, ಧೈರ್ಯಬಿಟ್ಟು ಕೊರಗುತ್ತಿರುವೆ?''

'ಅಜ್ಜಿ' ಅತ್ತಿಗೆಯ ಪಾಡು ಹಾಗಾಯ್ತು. ಅಣ್ಣನಿಗೆ.....ಅಣ್ಣನಿಗೆ......ಅಣ್ಣನೂ......ಎಂದು ಮುಂದೆ ಹೇಳಲಾರದೆ ಕಂಠ ಬಿಗಿದು ಗದ್ಗದಿಸುತ್ತ ಕಣ್ಣೀರಿಡುತ್ತಿರುವ ಸುಮಿತ್ರಾತ್ಮಜನನ್ನು ಸಂತೈಸುತ್ತಾ ಕಣ್ಣೀರೊರಸಿ–

"ದುಃಖಿಸ ಬೇಡ ಮಗು ನಿನ್ನಣ್ಣನ ಪ್ರಾಣಕ್ಕೆ ನಾನು ಹೊಣೆ; ಗುರುಕೃಪೆಯಿಂದ ರಾಮನ ಕಾಯಿಲೆಯನ್ನು ಈಗಲೇ ಗುಣಪಡಿಸುತ್ತೇನೆ ನಡೆ ಗುಡಿಸಿಲಿಗೆ ಎಂದು ಸಂತೈಸಿ ಕರೆದು ತಂದಳು.

ಎಲುಬಿನ ಗೂಡಿನಂತೆ ನಿಶ್ಚೇಷ್ಟನಾಗಿ ಮಲಗಿರುವ ಶ್ರೀರಾಮಚಂದ್ರನ ಮಂಚಕ್ಕೆ ತನ್ನ ಗುರುವನ್ನು ಧ್ಯಾನಿಸುತ್ತ ಪ್ರದಕ್ಷಿಣೆಮಾಡಿ ಕೌಸಲ್ಯಾನಂದನನ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ, ಬೆರಗಾಗಿ ನೋಡುತ್ತಿರುವ ಲಕ್ಷ್ಮಣನತ್ತ ತಿರುಗಿ ನಗುತ್ತ ನುಡಿದಳು–

"ವತ್ಸ, ರಾಮನ್ ಸುಕ್ಷೇಮನ್, ಪತ್ತುವಿಡು
ನಿನ್ನ ದುಃಖಮವ್"

ಮರುದಿನ ಬೆಳಗಾಯ್ತು. ಆಶ್ಚರ್ಯವೆಂಬಂತೆ ಶ್ರೀರಾಮಚಂದ್ರ ಸದೃಢನಾಗಿ ಆರೋಗ್ಯಗೊಂಡು ಎದ್ದು ಕಳಿತದ್ದನ್ನು ಕಂಡು ಊರ್ಮಿಳೇಶ ಕೃತಜ್ಞತೆಯಿಂದ ಶಬರಜ್ಜಿಯ ಪಾದಕ್ಕೆ ಅಡ್ಡಬಿದ್ದನು.

ಅಂದೇ ಮಲಗಿದಳು ಶಬರಿ ತನ್ನ ಶುಶ್ರೂಷೆಯಲ್ಲಿ ದಣಿದು ನಿದ್ದೆಗೆಟ್ಟು ಬೆಂಡಾದಶಬರಿಯ ಆರೈಕೆಯಲ್ಲಿ ತನ್ನ ಮನದಳಲನ್ನೂ ಮರೆತು ಉಪಚರಿಸತೊಡಗಿದನು ರಾಮಚಂದ್ರ. ಎಲ್ಲವನ್ನು ಮರೆತ ತನ್ನ ಆರೈಕೆ ಮಾಡುತ್ತಿರುವ ರಾಮನನ್ನು ಕುರಿತು ಶಬರಿ–

"ಹಣ್ಣೆಲೆಗೇಕೆ ಈ ಆರೈಕೆ ಕಂದ, ನಿನ್ನ ಕೈಯಿಂದ ಆರೈಕೆ ಪಡೆಯುತ್ತಿರುವ ನಾನೇ ಧನ್ಯಳು. ಶಾಂತಿಯಿಂದ ಪರಮಾತ್ಮನಲ್ಲಿ ಸೇರುತ್ತೇನೆ. ದುಃಖವನ್ನು ಬಿಟ್ಟು ಮುನ್ನಡೆ.ನಾನೊಂದು ಕನಸ ಕಂಡೆ–ಲಂಕೇಶ ದ ಶ ಕಂ ಠ ರಾ ವ ಣ ನ ಉದ್ಯಾನವನದಲ್ಲಿ ಸೀತೆ ನಿನ್ನ ಧ್ಯಾನದಲ್ಲೇ ಸೊರಗಿ ಮರುಗುತ್ತಿದ್ದಾಳೆ. ನೀನು ಇಲ್ಲಿಗೆ ಬಂದ ದಿನವೇ ಹೇಳಿದೆ,–ನಿನ್ನಂತೆ ಪತ್ನೀವಿಯೋಗಗೊಂಡು ಗೆಳೆಯರೊಡನೆ ಋಷ್ಯಮೂಕ ಪರ್ವತದ ಗುಹೆಗಳಲ್ಲಿ ವಾಸಿಸುತ್ತಿದ್ದಾನೆ ಸುಗ್ರೀವ. ಮುಂದೆ ನೋಡು, ಕಾಣುತ್ತಿದೆ ಋಷ್ಯಮೂಕ ಪರ್ವತ.ಪಕ್ಕದಲ್ಲೇ ನನ್ನ ಗುರು ಮತಂಗ ಮುನಿಗಳ ಆಶ್ರಮವಿದೆ. ಮತಂಗ ಮುನಿಗಳ ಶಾಪದಿಂದಾಗಿ ವಾಲಿ ಅಲ್ಲಿಗೆ ಪ್ರವೇಶಿಸಲಾಗದೆ ವಾ ನ ರ ರಾ ಜ ಧಾ ನಿ ಕಿಷ್ಕಿಂಧೆಯಲ್ಲಿದ್ದಾನೆ. ರಾಜ್ಯ ಭ್ರಷ್ಟನಾಗಿ, ಪತ್ನಿಯನ್ನೂ ಕಳೆದು ಕೊಂಡು ದುಃಖಿಯಾದ ಸುಗ್ರೀವನ ಸಖ್ಯಪಡೆ "ದುಃಖಿಗೆ ನೆರಂ ದುಃಖಿ, ಗೆಲ್ಗೆ ದೈವೇಚ್ಛೆ; ನಿನ್ನಿಚ್ಛೆಯುಂ ಸಲ್ಗೆ" ಎಂದು ಹೇಳುತ್ತಲೇ ಶಾಂತಿಯಿಂದ ಕಣ್ಮುಚ್ಚಿದಳು ಆ ಅಮರ ಸನ್ಯಾಸ್ಯೆ! ಶಬರಿ.

1—7—81 ರಿಂದ
31—7—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.



**ಮೇಷ :**

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

8ರ ವರೆಗೆ ಉದ್ಯೋಗಸಂಬಂಧವಾದ ಆಂದೋಳನ, ತಗಾದೆ. ಅನಗತ್ಯ ವೆಚ್ಚ. 16 ನಂತರ ಸ್ನೇಹಿತರು, ಬಂಧುಗಳ ಆಗಮನ. ತಿಂಗಳು ಪೂರ್ತ ಹಿರಿಯರ ಪ್ರಶಂಸೆ. ಆಪ್ತರಿಂದ ಅಥವಾ ಮಕ್ಕಳಿಂದ ದೂರಾಗುವಿಕೆ. ಧನಲಾಭ, ಯಶಸ್ಸುಗಳಿದ್ದರೂ ಮನಃಶಾಂತಿ ಕಡಮೆ. 16ರ ನಂತರ ತುಸು ಅನಾರೋಗ್ಯ. ಒಟ್ಟಿನಲ್ಲಿ ವಿಶೇಷಗಳಿಲ್ಲದ ಸಾಧಾರಣ ತಿಂಗಳು.



**ವೃಷಭ :**

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

8ರ ನಂತರ ಔದ್ಯೋಗಿಕ ತಗಾದೆ, ವಿವಾದ. ಧನಲಾಭ, ಯಶೋಲಾಭ, ಹೊಸ ಉಡುಪು. ಮಕ್ಕಳ ಮೂಲಕ ಆಂದೋಳನ. 16ರ ನಂತರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು. 8ರ ನಂತರ ಮನೆಯಲ್ಲಿ ಕಳ್ಳತನ ಅಥವಾ ವಸ್ತುನಷ್ಟ ಉಂಟಾಗುವುದು.



**ಮಿಥುನ :**

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

8ರ ವರೆಗೆ ಧನನಷ್ಟ ಅಥವಾ ಅನಗತ್ಯ ವೆಚ್ಚ. ಒಳ್ಳೆಯ ಸ್ನೇಹಿತರು, ಆದರೆ ಬಂಧುಗಳ ಮೂಲಕ ತೊಂದರೆ. 16ರ ವರೆಗೆ ತಗಾದೆ, ಆಪ್ತರಿಂದ ಬೇರ್ಪಡೆ, ಪ್ರಯಾಣ ಅಥವಾ ಹೊಟ್ಟೆ ನೋವು ಅಥವಾ ಇತರರಿಂದ ವಂಚನೆ.



**ಕರ್ಕಾಟಕ :**

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಶೃಂಗಾರಭಾವ. ಹಿರಿಯರ ಪ್ರಶಂಸೆ. ಹೊಸ ಉಡುಪು. 20ರ ನಂತರ ಪ್ರಯಾಣ. ಹೆಂಡತಿಯ ಅತೃಪ್ತಿ ಅಥವಾ ಹೊಟ್ಟೆ ಇಲ್ಲವೇ ಕಣ್ಣುನೋವು. ಆಗದವರ ಮೂಲಕ ಉಂಟಾಗುವ ತಗಾದೆಗಳಿಂದ ಮನಃಶಾಂತಿ

ಭಂಗ. 8 ರವರೆಗೆ ಹಾಗೂ 20ರ ನಂತರ ಒಳ್ಳೆಯ ದಿನಗಳು.



**ಸಿಂಹ :**

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಅನುಕೂಲ ಕಾಲ. ಶೃಂಗಾರ ಭಾವ. ಧನ, ಹಲವು, ಹೇರಳ ವೆಚ್ಚ. 16ರ ವರೆಗೆ ಅತ್ಯಂತ ಶುಭ. ತುಸು ತೊಂದರೆ ನಂತರ ಪ್ರಯಾಣ.



**ಕನ್ಯಾ :**

(ಉತ್ತರ 2,3,4, ಪಾದ, ಹಸ್ತ, ಚಿತ್ತ 1,2 ಪಾದ)

ಅಪಮಾನ ಅಥವಾ ಧನ ನಷ್ಟ ಸಂಭವಿಸಬಹುದು. ಪುತ್ರರೊಡನೆ ಜಗಳ. ಪ್ರಯಾಣ, ಹೊಸಪರಿಚಯ, ಹೊಸ ಉಡುಪು. 8ರ ವರೆಗೆ ತುಸು ಒಳಿತು ನಂತರ ಹೆಚ್ಚು ಒಳಿತು, ಆದರೆ ಮನಃಶಾಂತಿ ಭಂಗ.



**ತುಲಾ :**

(ಚಿತ್ತ 3,4 ಪಾದ, ಸ್ವಾತಿ, ವಿಶಾಖಾ 1,2,3 ಪಾದ)

ಧನನಷ್ಟ ಅಥವಾ ಅಪಮಾನ. ಪ್ರಯಾಣ, ಪ್ರಯಾಸ. 19 ರೊಳಗೆ ತಗಾದೆಗಳುಂಟಾಗಬಹುದು. ನಂತರ ಒಳ್ಳೆಯ ಸ್ನೇಹಿತರು. ಆರ್ಥಿಕ ಪರಿಸ್ಥಿತಿ ಸುಧಾರಿಸುವುದು. ಆದರೂ ಮನಃಶಾಂತಿ ಯಿರದು. ಭಗವನ್ನಾಮ ಸ್ಮರಣೆ, ರುದ್ರಾಭಿಷೇಕದಿಂದ ಒಳಿತು.



**ವೃಶ್ಚಿಕ :**

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಉಲ್ಲಾಸ ಚಿತ್ತ, ಧನಪ್ರಾಪ್ತಿ. 8 ರೊಳಗೆ ಹೆಂಡತಿಯೊಡನೆ ವಿರಸ ಅಥವಾ ಹೊಟ್ಟೆನೋವು ಅಥವಾ ಕಣ್ಣುನೋವು. ಪುಣ್ಯಕಾರ್ಯದಲ್ಲಿ ಭಾಗವಹಿಸುವಿರಿ. ಹೊಸ ಉಡುಪು. 8ರ ನಂತರ ಶರೀರಕ್ಕೆ ಪೆಟ್ಟು. ಒಟ್ಟಿನಲ್ಲಿ ಒಳಿತಿನ ತಿಂಗಳು.



**ಧನುಸ್ಸು :**

(ಮೂಲ, ಪೂ. ಉ. 1 ನೇ ಪಾದ)

16 ರೊಳಗೆ ಪ್ರಯಾಣ ಸಂಭವಿಸಬಹುದು. ಹೊಟ್ಟೆನೋವು ಅನಂತರ ಹೆಂಡತಿಯ ಅತೃಪ್ತಿ ಅಥವಾ ಕಣ್ಣುನೋವು. ಧನ, ವಸ್ತ್ರ ಲಾಭ, ಶೃಂಗಾರ ಸ್ವಭಾವ. ಆಯ ವ್ಯಯ ಸಮಾನ. 8 ರವರೆಗೆ ಒಳಿತು.



**ಮಕರ :**

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಧನಲಾಭ. ಯಶಸ್ಸು. ಪಾಪ ಪ್ರವರ್ತನೆ. ಸ್ತ್ರೀ ಮೂಲಕವಾದ ತೊಂದರೆಗಳು. ನಂತರ ಹೊಸ ಉಡುಪು. 8ರೊಳಗೆ ಮಕ್ಕಳ ಮೂಲಕ ಚಿಂತೆ. ಒಟ್ಟಿನಲ್ಲಿ ಈ ಈ ತಿಂಗಳು ಸುಖವಾಗಿ ಕಳೆಯುವುದು.



**ಕುಂಭ :**

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ತುಸು ಅನಾರೋಗ್ಯ. ಜ್ವರ ಅಥವಾ ಉದರ ಬಾಧೆ. 8ರ ನಂತರ ಮಕ್ಕಳ ಮೂಲಕ ಅಥವಾ ಅಗದವರ ಮೂಲಕ ಆಂದೋಳನ. 19ರ ನಂತರ ಸ್ತ್ರೀಯರ ಮೂಲಕ ತೊಂದರೆ. ಆಗಾಗ ಪ್ರಯಾಣ. ಪ್ರಯಾಸ ಅಥವಾ ಆಪ್ತರಿಂದ ಬೇರ್ಪಡೆ. 19ರ ನಂತರ ತುಸು ಅಪಕೀರ್ತಿ. 16ರ ನಂತರ ಒಳಿತು.



**ಮೀನ :**

(ಪೂ. ಭಾ. 4 ಪಾದ ಉ. ಭಾ. ರೇವತಿ)

ಆಗಾಗ ಪ್ರಯಾಣ, ಶೃಂಗಾರ ಭಾವ. 8 ರೊಳಗೆ ಪುತ್ರರ ಮೂಲಕ ಅಥವಾ ಅಕ್ರಮವಾಗಿ ಧನಪ್ರಾಪ್ತಿ. ನಂತರ ಅನಾರೋಗ್ಯ, ದುಷ್ಟ ಸಹವಾಸ. 19 ರೊಳಗೆ ಬಂಧುಗಳ ಆಗಮನ, ಹಿರಿಯರ ಪ್ರಶಂಸೆ, ಒಟ್ಟಿನಲ್ಲಿ ಮನೆಯಲ್ಲಿ ವಸ್ತು ಸಮೃದ್ಧಿ. *

# ವಾರ್ತಾಲಹರಿ

## ಕರ್ನಾಟಕದಲ್ಲಿ........

### ಸಂಸ್ಕೃತ ವಿದ್ವಾಂಸರ ಸನ್ಮಾನ

ಕರ್ನಾಟಕ ಸರ್ಕಾರ ಪ್ರತಿವರ್ಷದಂತೆ ಈ ವರ್ಷವೂ ಸಂಸ್ಕೃತ ಸಾಹಿತ್ಯ, ಭಾಷೆ ಶಾಸ್ತ್ರಗಳಲ್ಲಿ ಪ್ರಸಾರ, ಸಂಶೋಧನೆ, ಅನುವಾದ, ಕಾರ್ಯಗಳನ್ನು ಯಶಸ್ವಿಯಾಗಿ ಕೈಗೊಂಡು ಖ್ಯಾತರಾದ ಹತ್ತುಮಂದಿಯನ್ನು ಸನ್ಮಾನಿಸಿದೆ. ಒಂದು ಸಾವಿರರೂಗಳ ನಗದು ಬಹುಮಾನದೊಡನೆ ಕೂಡಿರುವ ಈ ಸನ್ಮಾನಿತರಲ್ಲಿ ಈ ಬಾರಿ ಕರ್ನಾಟಕ ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗಾಧ್ಯಕ್ಷ ಡಾ॥ ಕೆ. ಕೃಷ್ಣಮೂರ್ತಿ ಅವರೂ ಒಬ್ಬರು.

ಡಾ॥ ಕೆ. ಕೃಷ್ಣಮೂರ್ತಿ ಅವರ ಲೇಖನಗಳನ್ನು ಕನ್ನಡದಲ್ಲಿ ಸಪ್ತಗಿರಿ ಪ್ರಕಟಿಸುತ್ತಿದೆ. (ಈ ಸಂಚಿಕೆಯಲ್ಲೂ ಒಂದು ಲೇಖನ "ವಾಲ್ಮೀಕಿ ರಾಮಾಯಣದ ಮಹೋನ್ನತಿ"—ಪುಟ 5-ಪ್ರಕಟವಾಗಿದೆ) ಶ್ರೀಯುತರು ಕನ್ನಡಿಗರಿಗೆ ಅದರಲ್ಲೂ ಸಾಹಿತ್ಯ ಮೀಮಾಂಸೆಯ ವಿದ್ಯಾರ್ಥಿಗಳಿಗೆ ಚಿರಪರಿಚಿತರು. ಸಂಸ್ಕೃತದಲ್ಲಿನ ಬಹುತೇಕ ಎಲ್ಲ ಸಾಹಿತ್ಯ ಮೀಮಾಂಸಾ ಕೃತಿಗಳನ್ನು ಕನ್ನಡಕ್ಕೆ ತಂದು ನೀಡಿದವರು ಅವರು. ಸಂಸ್ಕೃತದ ನಾಟಕಗಳ ಸೌಂದರ್ಯವನ್ನು ಕನ್ನಡಿಗರು ಸವಿಯುವಂತೆ ಮಾಡಿದವರು,

ತಮ್ಮ ಹಾಗೂ ಇತರ ಸನ್ಮಾನಿತರ ಪರವಾಗಿ ಮಾತನಾಡುತ್ತ ಅವರು ಶ್ರೀಮತಿ ನಾಗಮ್ಮ ಕೇಶವಮೂರ್ತಿ ಅವರ (ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖಾ ಮಂತ್ರಿ, ಕರ್ನಾಟಕ) ಅಧ್ಯಕ್ಷತೆಯಲ್ಲಿ ನೆರೆದ ಸಭೆಯಲ್ಲಿ 'ಸಂಸ್ಕೃತ ಒಂದು ಸ್ಥಿರವಾದ ಭಾಷೆ ಎಂದೂ ಅದ್ದರಿಂದಲೇ ಅದನ್ನು ಅಮರ ಭಾಷೆ ದೇವಭಾಷೆ ಎಂದು ಕರೆದರು ಎಂದೂ ವಿವರಿಸಿ, ಪ್ರೌಢಿಮೆಯನ್ನು ಗುರುತಿಸಿದ ಸರ್ಕಾರಕ್ಕೆ ಕೃತಜ್ಞತೆಯನ್ನರ್ಪಿಸಿ, ತಾವು ಹಾಗೂ ಇತರ ಸನ್ಮಾನಿತರು ಈ ಸನ್ಮಾನವನ್ನು ಮುಂದಿನ ಕ್ರಿಯಾಶೀಲತೆಗೆ ಪೂರಕ ಪ್ರೋತ್ಸಾಹವೆಂದು ಸ್ವೀಕರಿಸುವುದಾಗಿ ಹೇಳಿದರು.

### ಶೋಕ ಸೂಚನೆ

ತಿ.ತಿ.ದೇ. ಗಳ ಪರವಾಗಿ ಹಾಗೂ ತಿರುಪತಿಯ ನಾಗರಿಕರ ಪರವಾಗಿ ದಿವಂಗತ ಫಾಲ್ಘಾಟ್ ಮಣಿ ಅಯ್ಯರ್ ಅವರ ನಿಧನಕ್ಕಾಗಿ ಶೋಕವನ್ನು ಸೂಚಿಸಲಾಯಿತು.

ಸಂತಾಪ ಸೂಚನೆಯ ಸಭೆಯ ಅಧ್ಯಕ್ಷತೆ ವಹಿಸಿದ ಶ್ರೀ ಬಿ. ರಜನೀಕಾಂತರಾಯರು (ಶ್ರೀವೆಂಕಟೇಶ್ವರ ಕಲಾಪೀಠ) ಫಾಲ್ಘಾಟರ ನಿಧನದಿಂದ ಉಂಟಾಗಿರುವ ನಷ್ಟ ತುಂಬಲು ಕಷ್ಟಸಾಧ್ಯವೆಂದರು. ವಿದ್ವಾನ್ ಎಂ. ಎಸ್. ಬಾಲಸುಬ್ರಹ್ಮಣ್ಯ ಶರ್ಮರು ಮಾತನಾಡಿ ದಿವಂಗತರು ತಮ್ಮ ಒಂದು ಪರಂಪರೆಯನ್ನೇ ನಮಗೆ ಬಿಟ್ಟಿದ್ದಾರೆ. ಅದನ್ನು ತಿ.ತಿ.ದೇ. ಆಸ್ಥಾನ ವಿದ್ವಾಂಸ ಶ್ರೀ ಯಲ್ಲಾ ವೆಂಕಟೇಶ್ವರರಾವ್ ಮತ್ತಿತರರಲ್ಲಿ ಕಾಣಬಹುದು ಎಂದರು.

ಪ್ರೊ॥ ಡಿ. ಪಶುಪತಿ ಅವರು (ಶ್ರೀವೆಂಕಟೇಶ್ವರ ಸಂಗೀತ ನೃತ್ಯಕಲಾಶಾಲೆ) ಫಾಲ್ಘಾಟ್ ಮಣಿ ಅಯ್ಯರ್ ಅವರನ್ನು ತನ್ನ ಆಸ್ಥಾನ ವಿದ್ವಾಂಸ ಎಂದು ಗೌರವಿಸುವ ಅದೃಷ್ಟ ತಿ.ತಿ.ದೇ. ಗಳದಾಗಿದ್ದಿತು ಎಂದರು. ಶ್ರೀ ಕಾಮಿಶೆಟ್ಟಿ ಶ್ರೀನಿವಾಸಲು ಶೆಟ್ಟಿ (ಅನ್ನಮಾಚಾರ್ಯ ಪ್ರಾಜೆಕ್ಟ್) ಅವರು ಮಾತನಾಡುತ್ತ ಸಂಗೀತ ಪ್ರಪಂಚ ಒಂದು ರತ್ನವನ್ನು ಕಳೆದುಕೊಂಡಿತು ಎಂದು ಅಭಿಪ್ರಾಯಪಟ್ಟರು. ಶ್ರೀ ವಿ. ಎಸ್. ವೆಂಕಟನಾರಾಯಣ (ತ್ಯಾಗರಾಜಸ್ವಾಮಿ ದೇವಾಲಯದ ಧರ್ಮದರ್ಶಿ) ಅವರು, ವಿದೇಶೀಯರೂ ಮೆಚ್ಚುತ್ತಿದ್ದ ದಿವಂಗತರ ಮೃದಂಗ ವಿದ್ವತ್ ವರ್ಣಿಸಲಸದಳ ಎಂದು ತಿಳಿಸಿದರು.

### ತಿರುಮಲೆಯ ಸೋಪಾನ ಮಾರ್ಗದಲ್ಲಿ ನೀರು ನೆರಳು.

ತಿರುಪತಿಯಿಂದ ತಿರುಮಲೆಗೆ ಸೋಪಾನಮಾರ್ಗದಲ್ಲಿ ನಡೆದು ಹತ್ತುವ ಯಾತ್ರಿಕರ ಅನುಕೂಲಗಳಿಗಾಗಿ, ಅವರ ಸಪ್ತಗಿರಿಯಾತ್ರೆಯನ್ನು ಹೆಚ್ಚು ಸುಖಕರವೂ, ಅಪೇಕ್ಷಿತವೂ ಆಗುವಂತೆ ಮಾಡಲು ತಿ.ತಿ.ದೇ. ಗಳ ಆಡಳಿತ ನಿರ್ವಾಹಕ ಮಂಡಳಿ ತೀರ್ಮಾನಿಸಿದೆ. ತತ್ಫಲವಾಗಿ ಇಡೀ ಸೋಪಾನ ಮಾರ್ಗದಲ್ಲಿ ಆಸ್‌ಬೆಸ್ಟಾಸ್ ಶೀಟ್‌ಗಳ ಮೇಲು ಛಾವಣಿಯನ್ನು ಸುಮಾರು 20 ಲಕ್ಷರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲಾಗುವುದೆಂದೂ, ಮೊದಲ ಹಂತವಾಗಿ ಅಲಿಪಿರಿಯಿಂದ ಗಾಳಿಗೋಪುರದವರೆಗೆ, ನಂತರ ಬಸ್ ರಸ್ತೆಯನ್ನು ದಾಟಿದ ನಂತರ ಮೊಣಕಾಲುಮುರಿಯವರೆಗೆ ಈ ಮೇಲು ಛಾವಣಿಯನ್ನು ನಿರ್ಮಿಸಲಾಗುವುದೆಂದು ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಅವರು ತಿಳಿಸಿದ್ದಾರೆ.

### ಫಾಲ್ಘಾಟ್ ಮಣಿ ಅಯ್ಯರ್

ಪ್ರಖ್ಯಾತ ಮೃದಂಗ ವಿದ್ವಾಂಸ ಶ್ರೀ ಫಾಲ್ಘಾಟ್ ಮಣಿ ಅಯ್ಯರ್ ಅವರು ಕೊಚ್ಚಿನ್‌ನ ಮೆಡಿಕಲ್ ಟ್ರಸ್ಟ್ ಆಸ್ಪತ್ರೆಯಲ್ಲಿ ದಿನಾಂಕ 30–5–81 ರ ಮುಂಜಾವಿನಲ್ಲಿ ಪರಮಪದವನ್ನೈದಿದರೆಂದು ತಿಳಿಸಲು ವಿಷಾದವಾಗುತ್ತದೆ.

ಐವತ್ತು ವರ್ಷಗಳಿಗೂ ಮೇಲ್ಪಟ್ಟು ಸಂಗೀತ ಕ್ಷೇತ್ರದಲ್ಲಿ ವಿಶೇಷವಾಗಿ 'ಲಯ' ಕ್ಷೇತ್ರದಲ್ಲಿ ತಮ್ಮ ಅದ್ವಿತೀಯ ಬೆರಳುಗಳನ್ನಾಡಿಸಿದ ದಿವಂಗತರ ವಿದ್ವತ್ ಅನುಪಮವಾಗಿದ್ದಿತು. ಅವರು ಅನೇಕ ಸಂಗೀತಗಾರರ ಸಭೆಗಳಿಗೆ ಶೋಭೆಯನ್ನು ನೀಡಿದ್ದರು.

1956 ರಲ್ಲಿ ಕರ್ನಾಟಕ ಸಂಗೀತದ ವಾದ್ಯ ಸಂಗೀತಕ್ಕಾಗಿ ರಾಷ್ಟ್ರಪತಿಯವರ ಬಹುಮಾನ ಪಡೆದು 1965 ರಲ್ಲಿ ಎಡಿನ್‌ಬರೋದಲ್ಲಿ ನಡೆದ ಸಂಗೀತೋತ್ಸವದಲ್ಲಿ ಭಾಗವಹಿಸಿ, ಸಂಗೀತ ಅಕಾಡಮಿಯಿಂದ 'ಸಂಗೀತ ಕಲಾನಿಧಿ' ಬಿರುದನ್ನೂ, ತಮಿಳು ಇಸೈಸಂಘದಿಂದ "ಇಸೈ ಪೇರ್ ಅರಿಜ್ಞರ್" ಎಂಬ ಬಿರುದನ್ನೂ, ಮಿಗಿಲಾಗಿ 1971 ಲ್ಲಿ "ಪದ್ಮಭೂಷಣ" ಪ್ರಶಸ್ತಿಯನ್ನೂ ಅವರು ಪಡೆದಿದ್ದರು. ಸಪ್ತಗಿರಿಯ ಓದುಗರಿಗೆ, ದಿವಂಗತರು 2–4–81 ರಂದು ತಿ.ತಿ.ದೇ. ಆಸ್ಥಾನ ವಿದ್ವಾಂಸರಾಗಿ ಸನ್ಮಾನಿಸಲ್ಪಟ್ಟರೆಂಬುದು ಇನ್ನೂ ನೆನಪಿನಲ್ಲಿ ಉಳಿದಿರುವ ಸಂಗತಿಯೇ ಆಗಿದೆ.

ಪಾಲ್ಘಾಟ್ ಸುಬ್ಬಅಯ್ಯರ್, ಕಲ್ಪಿತಿ ವಿಶ್ವನಾಥ ಅಯ್ಯರ್, ತಂಜಾವೂರ್ ವೈದ್ಯನಾಥ ಅಯ್ಯರ್ ಅವರುಗಳ ಮಾರ್ಗದರ್ಶನದಲ್ಲಿ ಮೃದಂಗ ಬಾಜನೆ ವಿದ್ಯೆಯನ್ನು ಕರತಲಾಮಲಕಗೊಳಿಸಿಕೊಂಡ ದಿವಂಗತರು, ಪ್ರಖ್ಯಾತ ವಿದ್ವಾಂಸ ಯಹೂದಿ ಮೆನುಹಿನ್ ಅವರೆಂದಂತೆ "ಮೃದಂಗವಾದಕರಲ್ಲಿ ಅತಿಶ್ರೇಷ್ಠ" ರಾಗಿದ್ದರು.ಅವರೊಂದಿಗೆ ಸಂಗೀತ ಸಭೆಗಳಲ್ಲಿ ಭಾಗವಹಿಸಿದ ಹಲವು ಹಿರಿಯರೆಂದರೆ ಸರ್ವಶ್ರೀ ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್, ಮಹಾರಾಜಪುರಂ ವಿಶ್ವನಾಥ ಅಯ್ಯರ್, ಮಧುರೈ ಮಣಿ ಅಯ್ಯರ್ ಮೊದಲಾದವರು. ಸ್ತ್ರೀ ಸಂಗೀತಜ್ಞೆಯರಿಗೆ ಜೊತೆ ನೀಡುವುದಿಲ್ಲ ಎಂಬ ತತ್ತ್ವಕ್ಕೆ ಬದ್ಧರಾಗಿದ್ದರೂ ಈ ತತ್ತ್ವಕ್ಕೆ ಅಪವಾದವೆಂಬಂತೆ ಶ್ರೀಮತಿ ಡಿ.ಕೆ. ಪಟ್ಟಮ್ಮಾಳ್ ಅವರ ಗಾಯನಕ್ಕೆ ಮೃದಂಗದ ಜೊತೆ ನೀಡಿದ್ದರು. ದಿವಂಗತರಿಗೆ ಮೂವರು ಪುತ್ರರೂ, ಇಬ್ಬರು ಪುತ್ರಿಯರೂ ಇದ್ದಾರೆ.

ಅಲ್ಲಲ್ಲಿ ನೀರಿನ ತಾಣಗಳು, ದೀಪದ ವ್ಯವಸ್ಥೆ ಸುರಕ್ಷಣಾವ್ಯವಸ್ಥೆಗಳುಂಟಾಗಿರುವುದೂ, 7ನೇ ಮೈಲಿಗಲ್ಲಿನ ಬಳಿಯ ಪ್ರಸನ್ನಾಂಜನೇಯಸ್ವಾಮಿ ವಿಗ್ರಹದ ಬಳಿ ವಿಶ್ರಾಂತಿಗಾಗಿ ತಂಗಾಳಿಯ ಉದ್ಯಾನವನ, ಪ್ರಥಮ ಚಿಕಿತ್ಸಾ ಕೇಂದ್ರ ಲಘು ಉಪಹಾರ ಕೇಂದ್ರಗಳುಂಟಾಗಿರುವುದು ಯಾತ್ರಿಕರಿಗೆ ಅನುಭವಕ್ಕೆ ಬಂದಿರುವ ಅಂಶವೇ ಆಗಿದೆ. ಈಗಣ ಹೊಸ ಯೋಜನೆಯಿಂದ ಯಾತ್ರಿಕ ಸೌಲಭ್ಯಗಳು ಹೆಚ್ಚಾಗಿ, ಪ್ರಯಾಣ ಸುಖಕರವಾಗುವುದೆಂದು ಆಶಿಸಲಾಗಿದೆ.

## ಅನ್ನಮಾಚಾರ್ಯ ಜಯಂತಿ ಉತ್ಸವಗಳು

ಖ್ಯಾತ ವಾಗ್ಗೇಯಕಾರ ಶ್ರೀ ವೆಂಕಟೇಶ್ವರ ಸ್ವಾಮಿಯ ಭಕ್ತ ಶ್ರೀ ಅನ್ನಮಾಚಾರ್ಯರ 573ನೇ ಜಯಂತಿ ಉತ್ಸವ ತಿ.ತಿ.ದೇ. ಗಳ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಮೇ ತಿಂಗಳ 18 ರಿಂದ 20 ರವರೆಗೆ ಮೂರುದಿನಗಳ ಕಾಲ ಅಖಂಡವಾಗಿ ನಡೆಯಿತು.

18–5–81 ರಂದು ಉತ್ಸವದ ಉದ್ಘಾಟನೆ ಮಾಡುತ್ತ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀ ಎಂ.ವಿ. ರಾಮಶರ್ಮ ಅವರು ತೆಲುಗು ಕಾವ್ಯದಲ್ಲಿ ಮೊದಲಿಗೆ ದೇಶೀಯ ಗಂಧವನ್ನು ಹರಡಿದವರಲ್ಲಿ ಅನ್ನಮಯ್ಯ ಒಬ್ಬನೆಂದೂ ಆತನ ಕೃತಿಗಳಬಗ್ಗೆ ಹೆಚ್ಚಿನ ಅಧ್ಯಯನ–ಅದರಲ್ಲೂ ಕ್ಷೇತ್ರಯ್ಯ ಹಾಗೂ ತ್ಯಾಗರಾಜರ ಕೃತಿಗಳೊಂದಿಗೆ ತೌಲನಿಕ ಅಧ್ಯಯನ ನಡೆಯಬೇಕಾದ ಅಗತ್ಯವಿದೆ ಎಂದು ತಿಳಿಸಿದರು.

ಉದ್ಘಾಟನಾ ಸಮಾರಂಭದ ಅಧ್ಯಕ್ಷಭಾಷಣ ಮಾಡುತ್ತ ತಿ.ತಿ.ದೇ. ಆಡಳಿತ ನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಅನ್ನಮಾಚಾರ್ಯ ಕೃತಿಗಳನ್ನು ಖ್ಯಾತ ವಿದ್ವಾಂಸರ ಮೂಲಕ ಟೇಪ್ ಕಾಸೆಟ್‌ಗಳಾಗಿ ತಯಾರಿಸಿ ಪ್ರಸರಿಸುವ ಉದ್ದೇಶ ದೇವಸ್ಥಾನಗಳಿಗಿದೆ ಎಂದರು. ಅನ್ನಮಾಚಾರ್ಯ ಕೃತಿಗಳ ಬಗ್ಗೆ ಸಂಶೋಧನೆಗಳನ್ನು ಪ್ರೋತ್ಸಾಹಿಸಲು ಮದರಾಸು ಹಾಗೂ ಶ್ರೀವೆಂಕಟೇಶ್ವರ ವಿಶ್ವವಿದ್ಯಾನಿಲಯಗಳನ್ನೂ ಒಳಗೊಂಡಂತೆ ಆರು ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನ ಯೋಜನೆಗಳನ್ನು ಆರಂಭಿಸುವ ಯೋಜನೆಯೂ ಇದೆ ಎಂದು ತಿಳಿಸಿದರು.

ಸಭೆಯನ್ನು ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ (ವಿಶೇಷಾಧಿಕಾರಿ, ಅನ್ನಮಾಚಾರ್ಯ ಪ್ರಾಜೆಕ್ಟ್) ಅವರು ಸ್ವಾಗತಿಸಿದರು.

ಅದೇ ದಿನ ಸಂಜೆ ನಡೆದ ಸಭೆಯಲ್ಲಿ ಡಾ॥ ಕೆ. ರಾಮಲಕ್ಷ್ಮಿ ಆರುದ್ರ ಅವರು 'ತೆಲುಗು ಗೇಯ ಸಾಹಿತ್ಯದಲ್ಲಿ ಅನ್ನಮಯ್ಯನ ಸ್ಥಾನ' ಎಂಬ ವಿಷಯವಾಗಿ ಮಾತನಾಡಿದರು. ಕುಮಾರಿ ಆಲೇಖ್ಯ ಅವರ ಭರತನಾಟ್ಯದಲ್ಲಿ ಅನ್ನಮಯ್ಯನ ಕೃತಿಗಳು ರಂಜಿಸಿದವು.

19–5–81 ರಂದು ನಡೆದ ಭಾಷಾ ಗೋಷ್ಠಿಯಲ್ಲಿ ಶ್ರೀ ಜಿ. ಎನ್ ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಸರ್ವಶ್ರೀ ತೂಮಾಟಿ ದೋಣಪ್ಪ, ಚೇಕೂರಿ ರಾಮಾರಾವು, ಎಸ್. ಗಂಗಪ್ಪ ಇವರುಗಳು ಅನ್ನಮಯ್ಯನ ಕಾವ್ಯ, ಕೃತಿಗಳ ಭಾಷಾ ವೈವಿಧ್ಯವನ್ನು ಕುರಿತು ಮಾತನಾಡಿದರು. ಅಂದು ರಾತ್ರಿ ಕುಮಾರಿ ರಾಧಾಪ್ರಸಾದರಾವ್ ಅವರ ನಾಟ್ಯ ಕಾರ್ಯಕ್ರಮ ಯಶಸ್ವಿಯಾಯಿತು.

20–5–81 ರಂದು ಆಂಧ್ರಪ್ರದೇಶದ ಆಸ್ಥಾನ ವಿದ್ವಾಂಸ ಶ್ರೀ ದಾಶರಥಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಗೋಷ್ಠಿಯಲ್ಲಿ ಸರ್ವಶ್ರೀ ಬಿ. ರಾಮರಾಜು (ಉಸ್ಮಾನಿಯಾ ವಿ.ವಿ) ಎಸ್.ವಿ. ಜೋಗಾರಾವು (ಆಂಧ್ರ ವಿ.ವಿ) ತಿಮ್ಮಾವಜ್ಝುಲ ಕೋದಂಡರಾಮಯ್ಯ (ಮಧುರೆ ವಿ.ವಿ) ಎಸ್. ಬಿ. ರಘುನಾಥಾಚಾರ್ಯ, ಕೆ. ಸರ್ವೋತ್ತಮನ್ (ಇಬ್ಬರೂ ಶ್ರೀವೆಂಕಟೇಶ್ವರ ವಿ.ವಿ. ಯವರು) ಅವರುಗಳು ವಿವಿಧ ದೇಶೀ ಭಾಷೆಗಳಲ್ಲಿನ ಕೀರ್ತನ ಸಾಹಿತ್ಯದೊಂದಿಗೆ ಅನ್ನಮಯ್ಯ ಕೀರ್ತನ ಸಾಹಿತ್ಯವನ್ನು ತೌಲನಿಕವಾಗಿ ತೂಗಿ ನೋಡಿದರು. ನಂತರ ಗಾನಕಲೆ ಪ್ರತ್ರಿಕೆಯ ಸಂಪಾದಕ ಶ್ರೀರಾಮಮೂರ್ತಿ ಅವರು 'ಅನ್ನಮಯ್ಯನ ಸಂಗೀತ'ದ ಬಗ್ಗೆ ಮಾತನಾಡಿದರು. ಕೊನೆಯಲ್ಲಿ ಎಂ. ಎಸ್. ಬಾಲಸುಬ್ರಹ್ಮಣ್ಯಂ ಮತ್ತು ವೃಂದದವರಿಂದ ಸಂಗೀತ ಕಚೇರಿ ನಡೆಯಿತು.

## ವಿಶ್ವಹಿಂದೂ ಪರಿಷತ್ ದಕ್ಷಿಣ ಭಾರತ ಕಾರ್ಯಕರ್ತರ ಸಮ್ಮೇಳನ

ದಿನಾಂಕ 29, 30, 31, ಮೇ 1981 ರಲ್ಲಿ ತಿರುಪತಿಯಲ್ಲಿ ದಕ್ಷಿಣಭಾರತದ ನಾಲ್ಕು ರಾಜ್ಯಗಳಾದ ಕರ್ನಾಟಕ, ಕೇರಳ, ಆಂಧ್ರಪ್ರದೇಶ, ತಮಿಳು ನಾಡುಗಳ ವಿಶ್ವಹಿಂದೂ ಪರಿಷತ್ ಕಾರ್ಯಕರ್ತರ ಸಮ್ಮೇಳನ ಯಶಸ್ವಿಯಾಗಿ ನಡೆಯಿತು.

ಸುಮಾರು ಮುನ್ನೂರೈವತ್ತಕ್ಕೂ ಮಿಕ್ಕಿದ ಪ್ರತಿನಿಧಿಗಳನ್ನು ಭಾಗವಹಿಸಿದ ಈ ಸಭೆಯ ಉದ್ಘಾಟನೆಯಲ್ಲಿ ಮಾತನಾಡುತ್ತ ತಿ.ತಿ.ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಹಿಂದೂ ಜನಾಂಗದಲ್ಲಿ ಮರೆತು ಹೋಗುತ್ತಿರುವ ವೈಶಾಲ್ಯಗಳತ್ತ ತೀವ್ರ ಗಮನ ಹರಿಸಬೇಕಾದ ಅಗತ್ಯವನ್ನು ಕುರಿತು ಒತ್ತಿ ಹೇಳಿ, ಕಾರ್ಯಕರ್ತರು ಧಾರ್ಮಿಕ ಪ್ರಜ್ಞೆ ಮೂಲಭೂತವಾಗಿ ಹರಡುವಂತೆ ಮಾಡಬೇಕೆಂದೂ ಅದಕ್ಕಾಗಿ ದೇಶದ ಮೂಲೆ ಮೂಲೆಗಳಲ್ಲಿನ ಅವಿದ್ಯೆಯನ್ನು ನಾಶಪಡಿಸಲು ಕಟಿಬದ್ಧರಾಗಬೇಕೆಂದೂ ಕರೆ ನೀಡಿದರು.

ವಿಶ್ವಹಿಂದೂ ಪರಿಷತ್ ಕಾರ್ಯಕರ್ತರು ತಮ್ಮ ಕಾರ್ಯಕ್ಷೇತ್ರಗಳಲ್ಲಿನ ಸಮಸ್ಯೆಗಳನ್ನು ಕುರಿತು ವಿಚಾರ ವಿನಿಮಯ ಮಾಡಿಕೊಳ್ಳಲು, ಹಿಂದೂಧರ್ಮ ಪ್ರಸಾರ ಕಾರ್ಯದಲ್ಲಿ ಸಮಾನ ಉದ್ದೇಶಗಳನ್ನು ಹೊಂದಿದ ಸಂಘಸಂಸ್ಥೆಗಳ ಏಕೀಕರಣದ ಸಾಧ್ಯತೆಗಳನ್ನು ಕಂಡುಕೊಳ್ಳಲು ಹಾಗೂ ಬಲಾತ್ಕಾರ ಮತಾಂತರಗಳನ್ನು ತಡೆಯುವ ಉಪಾಯಗಳನ್ನು ಕಂಡುಕೊಳ್ಳಲು ಯೋಜಿಸಲಾಗಿದ್ದ ಈ ಸಮ್ಮೇಳನದಲ್ಲಿ ಕೇರಳ ತಮಿಳುನಾಡುಗಳಲ್ಲಿನ ಹಿಂದೂ ಧರ್ಮ ಸಂರಕ್ಷಣೆಯ ಬಗ್ಗೆ ಒತ್ತು ಹಾಕಲಾಯಿತು.

ಸಮ್ಮೇಳನದ ಸಮಾರೋಪ ಭಾಷಣ ಮಾಡಿದ ಶ್ರೀಶ್ರೀ ವಿಶ್ವೇಶ ತೀರ್ಥ ಸ್ವಾಮಿಗಳವರು ಹಿಂದೂಗಳ ಗುಂಪು ಮತಾಂತರಗಳನ್ನು ತಡೆಯುವಂತೆ ಕರೆ ನೀಡಿದರು. ಅವರು ತಮಿಳುನಾಡಿನಲ್ಲಿ ಈಚೆಗೆ ಉಂಟಾದ ಹರಿಜನರ ಗುಂಪು ಮತಾಂತರದ ಬಗ್ಗೆ ಮಾತನಾಡುತ್ತಿದ್ದರು. ಹಿಂದುಳಿದ ಜನರಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಜಾಗೃತಿಗೊಳಿಸುವುದರ ಮೂಲಕ, ಹಿಂದೂ ಧರ್ಮದ ಮುಖ್ಯ ತೊರೆಯಲ್ಲಿ ಅವರನ್ನೂ ಸಮಾನರಂತೆ ಸೇರಿಸಿ ಕೊಳ್ಳುವುದರ ಮೂಲಕ ಹಿಂದೂಧರ್ಮದ ಸಂರಕ್ಷಣೆ ಮಾಡಬೇಕೆಂದು ಅವರು ಒತ್ತಿ ಹೇಳಿದರು.



Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | | |
|---|---|---|
| | ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ | ರೂ 200 |
| 2 | ಅಭಿಷೇಕ | ರೂ 500 |
| 3. | ಗಂಬುರ | ರೂ 300 |
| 4. | ಪುನುಗು | ರೂ 200 |
| 5. | ಜಾಫ್ರಾ | ರೂ 100 |
| 6 | ಕಸ್ತೂರಿ | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 2500 |
| 8. | ತಿರುಪ್ಪಾವಡಾ | ರೂ 5000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 1745 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ | ರೂ 1000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 1500 |
| ಕಲ್ಯಾಣೋತ್ಸವ | ರೂ 1500 |
| ಬ್ರಹ್ಮೋತ್ಸವ | ರೂ 750 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

* ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ

ವಿವರಗಳಿಗೆ :

**ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

ಪ್ರವಾಸಿ ಮಂದಿರದ ಸಮೀಪದ ವಸತಿಗೃಹಗಳು :

| | | |
|---|---|---|
| ಎ. ಟಿ. ಸಿ | ದಿನವೊಂದಕ್ಕೆ | ರೂ 25–00 |
| | ½ ಕಾಟೇಜು 'ಎ' ಭಾಗ | ರೂ 15–00 |
| | ½ ಕಾಟೇಜು 'ಬಿ' ಭಾಗ | ರೂ 10–00 |
| ಪ್ರವಾಸಿಮಂದಿರ ಮೂರನೆಯಸಾಲು | | |
| | ಹೀಟರಿನ ಸೌಲಭ್ಯ ಇರುವುದು | ರೂ 12–00 |
| | ಇಲ್ಲದವು | ರೂ 10–00 |
| ಹಿಲ್ ವ್ಯೂ ಡೀಲಕ್ಸ್ ಕಾಟೇಜುಗಳು | | ರೂ 20–00 |
| ಹಿಲ್ ವ್ಯೂ ಗೆಸ್ಟ್ ಹೌಸ್ ದೊಡ್ಡ ಕಾಟೇಜು | | ರೂ 40–00 |
| | ಕಿರಿಯ ಕಾಟೇಜು | ರೂ 20–00 |
| ಹಿಲ್ ವ್ಯೂ ಕಾಟೇಜುಗಳು | | ರೂ 10–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 15–00 |
| ಶೇಷಾದ್ರಿನಗರ ,, | ,, | ರೂ 15–00 |
| ಅಂಜನಾದ್ರಿನಗರ ,, | ,, | ರೂ 15–00 |
| ಗರುಡಾದ್ರಿನಗರ ,, | ,, | ರೂ 15–00 |
| ವಿವಾಹದ ಕಾಟೇಜುಗಳು ದಿನಂಪ್ರತಿ | | ರೂ 30–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ | ಎರಡು ಹಾಸಿಗೆಗಳ ಕೋಣೆ | ರೂ 12–00 |
| | ನಾಲ್ಕು ,, | ರೂ 15–00 |
| | ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| | ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| | ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| | ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ ದೇ. ಗಳದ್ದು.

ತಿರುಮಲ ತಿರುಪತಿ ದೇವಸ್ಥಾನ.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.
3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.
4. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ತೊರೆದು ಜೀವಿಸಬಹುದೇ ಹರಿ ನಿನ್ನ ಚರಣಗಳ
ಮರೆಯ ಮಾತೇಕಿನ್ನು ಅರಿತು ಪೇಳುವೆನು.

ತಾಯಿ-ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿ ಬಂಧುಗಳ ಬಿಡಬಹುದು
ರಾಯ ತಾ ಮುನಿದರೆ ರಾಜ್ಯವನು ಬಿಡಬಹುದು
ಕಾಯಜನ ಪಿತ ನಿನ್ನ ಅಡಿಯ ಬಿಡಲಾಗದು.

ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು
ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
ಮಡದಿ ಮಕ್ಕಳ ತೊಲಗಿಸಿಯೆ ಬಿಡಬಹುದು
ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು

ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು
ಮಾನದಲಿ ಮನವ ತಗ್ಗಿಸಲುಬಹುದು
ಪ್ರಾಣನಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದೋ

—ಕನಕದಾಸರು-